ಶ್ರೀಃ

# ಪ್ರಮಥನಾಥ



ಲೇಖಕರು:

ಬಾಬು ಅತುಲಚಂದ್ರ, ಮಣ್ಣಿನ ಗಡಿಗೆ, ಪ್ರೇಮದ ಹುಚ್ಚು, ಕೃಷ್ಣ-ಲೀಲೆ, ಚಂದ್ರನ ಸಾಕ್ಷಿ
ಮೊದಲಾದುವುಗಳ ಲೇಖಕ ಮತ್ತು

'ಶ್ರೀಕೃಷ್ಣ ಸಂದೇಶ' ಪತ್ರಿಕೆಯ ಸಂಪಾದಕರಾದ

**ಮುದ್ರಾಡಿ ಜನಾರ್ದನಾಚಾರ್ಯ**

**ಉಡುಪಿ**

ಎಪ್ರಿಲ್ ೧೯೩೭

**ಬೆಲೆ:** ೦—೪—೦

# ಪ್ರಸ್ತಾವನೆ

ನಾವು 'ಚಂದ್ರನ ಸಾಕ್ಷಿ'ಯ ಪ್ರಸ್ತಾವನೆಯಲ್ಲಿ ಹೇಳಿರುವಂತೆ ಸಮಾಜದಲ್ಲಿ ನೀತಿಯನ್ನು ಪ್ರಚಾರಗೊಳಿಸುವ ದೃಷ್ಟಿಯಿಂದ ಬರೆದು ಪ್ರಕಟಿಸಿರುವ ಹಾಗೂ ಬರೆಯುಲಿರುವ ಕಥೆಗಳಲ್ಲಿ ಇದೊಂದು. ಇದಕ್ಕೊ ವಿಶೇಷ ಪ್ರಸ್ತಾವನೆಯನ್ನೇನೂ ನಾವು ಬಯಸುವುದಿಲ್ಲ.

ನಮಗೆ ಕಥೆಗಳನ್ನು ಕಲ್ಪಿಸಲು ಎಷ್ಟು ಕುತೂಹಲವೋ ಅಷ್ಟೇ ನಿಜವಾದ ಘಟನೆಗಳನ್ನೂ ಬರೆವ ಕುತೂಹಲ. ಆದುದರಿಂದಲೇ ವೃತ್ತಪತ್ರಗಳಲ್ಲಿ ಪ್ರಕಟವಾಗಿದ್ದ ಒಂದು ಮೊಕದ್ದಮೆಯ ಆಧಾರದಿಂದ ಈ ಕಥೆಯನ್ನು ಬರೆದಿರುವೆವು. ಆದರೆ ಕಥಾರಚನೆಯ ಕ್ರಮಕ್ಕನುಸಾರವಾಗಿ ಅಪ್ರಧಾನಗಳಾದ ಕೆಲವು ಸಂದರ್ಭಗಳನ್ನು ಕಥಾಪುಷ್ಟಿ ಮತ್ತು ವಿಷಯವಿವೇಚನೆಗಳಿಗಾಗಿ ನಾವು ಕಲ್ಪಿಸಿರುವೆವಾದರೂ ಪ್ರಧಾನ ಭಾಗವು ನಡೆದ ಸಂಗತಿಯೇ ಆಗಿರುತ್ತದೆ.

ಹೀಗಿದ್ದರೂ ಈ ಕಥೆಯಿಂದ ಯಾವ ವ್ಯಕ್ತಿಯನ್ನಾದರೂ ಹೊಗಳುವ-ತೆಗಳುವ ಉದ್ದೇಶವೇನೂ ನಮಗಿಲ್ಲ. ನವನಾಗರಿಕ ಪ್ರಪಂಚದಲ್ಲಿ ಇಂತಹ ಸಂಸಾರ-ದಾಂಪತ್ಯಗಳು ಎಷ್ಟೋ ಇರಬಹುದು. ನಮ್ಮ ದೃಷ್ಟಿಯು ನೀತಿಪ್ರಕಾಶದ ಕಡೆಗಿರುತ್ತದೆ.

ಆರ್ಯನಾರಿಯರಿಗೆ ಉಚಿತವಲ್ಲದ ಹಾಗೂ ವಿರುದ್ಧವಾದ ವಿದ್ಯಾಭ್ಯಾಸ ಮತ್ತು ನವನಾಗರಿಕತನದ ಸ್ವಾತಂತ್ರ್ಯ ಇವುಗಳ ದುಷ್ಪರಿಣಾಮಗಳನ್ನು ಮನಗಂಡು ಜನತೆಯು ಭಾರತೀಯ ಭವಿಷ್ಯಜ್ಜನಾಂಗದ ತಾಯಂದಿರನ್ನು ಆದಷ್ಟು ಧರ್ಮ-ನೀತ್ಯುಚಿತವಾದ ಶಿಕ್ಷಣ ಹಾಗೂ ಪಾತಿವ್ರತ್ಯಗಳಿಂದ ಅಲಂಕರಿಸಲು ಯತ್ನಿಸಲೆಂಬುದೇ ಈ ಕಥಾಲೇಖನದ ಉದ್ದೇಶವಾಗಿರುತ್ತದೆ.

ಇಲ್ಲಿ ಕಂಡುಬರುವ ನೀತಿಗಳನ್ನು ಇನ್ನೂ ಸ್ಪಷ್ಟಗೊಳಿಸುವ ಸಲುವಾಗಿ ಸದ್ಯವೇ ಇದರ ಎರಡನೆಯ ಭಾಗವನ್ನೂ ಪ್ರಕಟಿಸಬೇಕೆಂದಿರುವೆವು.

ವಾಚಕರ ಮನಸ್ಸಿಗೆ ನಮ್ಮಾ ನೀತಿಯು ರಮಿಸಿದರೆ ನಮ್ಮ ಶ್ರಮವು ಸಾರ್ಥಕವಾದಂತಾಗುವುದು.

ಉಡುಪಿ
15—12—1936

ಮುದ್ರಾಡಿ ಜನಾರ್ದನಾಚಾರ್ಯ

ಶ್ರಿಯೈ ನಮಃ

# ಪ್ರಮಥನಾಥ



"जल्पान्ति सार्धमन्येन पश्यन्त्यन्यं सविभ्रमम् ।
हृदये चिन्तयन्त्यन्यं प्रियः को नाम योषिताम् ॥
यो मोहान्मन्यते मूढो रक्तेय मम कामिनी ।
स तस्या वशगो नित्यं भवेत्क्रीडाशकुन्तवत् ।
रूपसम्पन्नपप्राम्यं प्रेमप्रायं प्रियंवदम् ।
कुलीनमनुकूल च कलत्रं कुत्र लभ्यते ॥

## ಮೊದಲನೆಯ ಪರಿಚ್ಛೇದ.

೧೯೦೯ನೆಯ ಇಸವಿ ವರ್ಷದ ಶರದೃತುವಿನ ಒಂದು ಮನೋಹರವಾದ ಸಂಧ್ಯಾಕಾಲವಾಗಿತ್ತು. ಕೃಷ್ಣಗಡದೊಂದು ಸುಂದರವಾದ ಮಹಡಿಯಮನೆ. ವಿದ್ಯಾವಂತಯುವಕನೊಬ್ಬನು ತನ್ನ ಕೊಠಡಿಯಲ್ಲಿ ಮೇಜಿನ ಮೇಲೆ ದೀಪವನ್ನು ಹಚ್ಚಿಟ್ಟು ಹತ್ತಿರವೇ ಒಂದು ಸುಖಾಸನದಲ್ಲಿ ಕುಳಿತು ಏನೋ ಯೋಚನಾಮಗ್ನನಾಗಿದ್ದನು.

ಆತನ ಹೃದಯದಲ್ಲಿ ಸ್ತ್ರೀಯರ ಗುಣ—ದೋಷಗಳ ಕುರಿತು ಕಲ್ಪನಾತರಂಗಗಳು ಎದ್ದೇಳುತ್ತಿರಬೇಕೆಂದು ನಮ್ಮ ಊಹೆ. ಊಹೆಯೇ ಏಸು, ನಿಜವಾಗಿಯೂ ಆತನು ಪ್ರೇಮಕಾತರನಾಗಿದ್ದನು. ಅಥವಾ ಕಾಮಾತುರನಾಗಿದ್ದನೆಂದರೂ ಎನಬಹುದು. ಆದರೂ ನೀತಿಯನ್ನು ಮೀರುವವನಲ್ಲ.

ಯುವಕನು ಫೇನೀ ಕಾಲೇಜಿನಲ್ಲಿ ಪ್ರೊಫೆಸರನಾಗಿದ್ದನು. ಹೆಸರು, ಬಾಬೂ ಪ್ರಮಥನಾಥ ಸರಕಾರ. ಮೊನ್ನೆ ತಾನೆ ಒಬ್ಬ ವಿದ್ಯಾವಂತ ಯುವತಿಯನ್ನು ಮದುವೆಯಾಗಿ ಪತ್ನಿಯನ್ನು ಮನೆಗೆ ಕರತಂತಿದ್ದನು. ಆದರೆ ಇಷ್ಟರ ತನಕ ಪ್ರಮಥನು ತನ್ನ ನವೋಢೆಯ ಅಂತರಂಗ ಸುಖವನ್ನು ಹೊಂದಲಾರದವನಾಗಿದ್ದನು. ಸ್ತ್ರೀಸ್ವಭಾವವೆಂತಹುದು? ಸ್ತ್ರೀಪ್ರೇಮವೆಂತಹುದು? ಅದೆಷ್ಟು ಆಳವಿರುವುದು? ಎಂಬುದನ್ನು ಪರೀಕ್ಷಿಸುವ ಯೋಗವು ಪ್ರಮಥನಿಗೆ ಜೀವನದಲ್ಲಿ ಇದೇ ಮೊದಲು. ಅದೇ ಆತನು ಎಷ್ಟು ಕಾತರನಾಗಿದ್ದನೋ ಅಷ್ಟೇ ಸಂಕೋಚ ಪಡುತ್ತಲೂ ಇದ್ದನು. ಹಲವು ಕಲ್ಪನೆಗಳಿಂದಲೇ ಆತನ ಮೂರು ನಾಲ್ಕು ದಿನಗಳು ವ್ಯರ್ಥವಾಗಿ ಸಂದಿದ್ದುವು. ಇಂದು ಸಹ ಏನೋ ವಿಚಾರವು ಆತನ ಮನಸ್ಸನ್ನಾವರಿಸಿತ್ತು. ಪ್ರಮಥನು ಸುಮ್ಮನೆ ಸುಖಾಸನದಲ್ಲಿ ಕುಳಿತಿದ್ದನು. ನೆಪಕ್ಕೆ ಒಂದು ವೃತ್ತಪತ್ರವನ್ನು ಕೈಯಲ್ಲಿ ಹಿಡಿದಿದ್ದನಾದರೂ ಆತನ ಮನಸ್ಸು ಅದರಲ್ಲಿದ್ದಿಲ್ಲ.

ಯುವಕನು ಯೋಚಿಸುತ್ತಿದ್ದಂತೆಯೇ ರಾತ್ರಿ ಘಂಟೆ ೯ ಸಂದು ಹೋಯಿತು. ಮನೆ

ಪ್ರಮಥನು ಯೋಚನೆಯಿಂದೆಚ್ಚತ್ತು ದಾಸಿಯನ್ನು ಕೂಗಿದನು. ದಾಸಿಯು ಬಂದು 'ಏತಕ್ಕೆ ಕೂಗಿದಿರಿ ಬಾಬು!' ಎಂದಳು. ಪ್ರಮಥನು ಆಕೆಯೊಡನೆ 'ನೋಡು, ರಾಣಿಯೊಡನೆ ವೀಳೆಯವನ್ನು ಹಿಡಕೊಂಡು ಇಲ್ಲಿಗೆ ಬರಹೇಳು' ಎಂದನು.

ಸ್ವಲ್ಪ ಹೊತ್ತಿನಲ್ಲೇ ದಾಸಿಯು ವೀಳೆಯದ ತಬಕನ್ನು ತಂದು ಪ್ರಮಥನ ಮುಂದಿಟ್ಟಳು. ಪ್ರಮಥನು ಕಂಡು ಸಂತಪ್ತನಾಗಿ 'ನಿನ್ನೊಡನೆ ಯಾರಂದರೆಂ'ದು ಗದರಿಸುವಷ್ಟರಲ್ಲೇ ದಾಸಿಯು ಓಡಿಹೋಗಿದ್ದಳು.

ಒಡನೆ ಪ್ರಮಥನು 'ವೀಣಾ!' ಎಂದು ಕೂಗಿದನು. ತುಸು ಹೊತ್ತಿನಲ್ಲೇ ಸುಂದರ ಯುವತಿಯೊಬ್ಬಳು ಪ್ರಮಥನ ಕೊಠಡಿಯನ್ನು ಪ್ರವೇಶಿಸಿ 'ಕರೆದಿರೇಕೆಂ'ದಳು

ಪ್ರಮಥನು ಎದ್ದು ಬಂದು ಆಕೆಯ ಕೈಯನ್ನು ಹಿಡಿದು ಅಲ್ಲೇ ಇನ್ನೊಂದು ಕುರ್ಚಿಯಲ್ಲಿ ಕುಳ್ಳಿರಿಸಿದನು. ವೀಣೆಯು ತಿರುಗಿ 'ಕರೆದುದೇಕೆ'ಂದು ಕೇಳಿ ಆವುದೋ ಒಂದು ಪುಸ್ತಕವನ್ನು ಬಿಡಿಸಿದಳು.

ಪ್ರಮಥನು ಆ ಪುಸ್ತಕವನ್ನೆಳೆಕೊಂಡು 'ಎಷ್ಟೆಂದು ಓದುವುದು? ಅದಕ್ಕೊಂದು ಮಿತಿಯಿಲ್ಲವೇ?' ಎಂದನು. ವೀಣೆಯು ಸ್ವಲ್ಪ ವಿಮನಸ್ಕಳಾಗಿ 'ಅದನ್ನು ನಾನು ಬಲ್ಲೆ ಕರೆದಿರೇಕೆ ಹೇಳಿ' ಎಂದು ತಿರುಗಿ ಕೇಳಿದಳು

ಪ್ರಮಥನು 'ವೀಣಾ! ಹಾಗೆಂದರೇನು? ಒಬ್ಬನಿಗೆ ಏಕೋ ಬೇಸರವಾಯಿತು. ಅದಕ್ಕಾಗಿ ಕರೆದೆ' ಎಂದ.

ಆಗ ವೀಣೆಯು 'ಚೆನ್ನಾಗಿದೆ. ಅದಕ್ಕೆ ನಾನೇನು ಮಾಡಲಿ?' ಎನಲು ಪ್ರಮಥನು 'ಇದು ಮತ್ತೂ ಚೆನ್ನಾಗಿದೆ. ನೀನೇನು ಮಾಡಲೆ? ಎಲ್ಲಾ ನಾನು ಹೇಳಿಕೊಡುವೆನು. ಮೊದಲೊಂದು ವೀಳೆಯವನ್ನು ಕೊಡು.' ಎಂದು ಕುರ್ಚಿಯನ್ನು ಆಕೆಯ ಹತ್ತಿರಕ್ಕೆಳೆಕೊಂಡು ಕುಳಿತನು.

**ವೀಣೆ:**—ದಾಸಿಯನ್ನು ಓಡಿಸಿದಿರಷ್ಟೆ?

**ಪ್ರಮಥ:**—ನಾನು ನಿನ್ನನ್ನು ಬರಹೇಳಿದ್ದೆ.

**ವೀಣೆ:**—ನನಗೆ ತುಂಬಾ ಓದಲಿಕ್ಕಿರುವುದು

**ಪ್ರಮಥ:**—ಪರೀಕ್ಷೆಯೆಲ್ಲಾ ತೀರಿತಷ್ಟೆ.

**ವೀಣೆ:**— ಪ್ರೈವೇಟಾಗಿ ಓದಲಿರುವುದು.

**ಪ್ರಮಥ:**—ಆಗಲಿ! ಹಗಲು ಹೊತ್ತು ಓದಿದ್ದು ಸಾಲದೇ?

**ವೀಣೆ:**—ಓದುವವರು ಯಾವಾಗ ಓದಿದರೇನು? ನನ್ನ ಪುಸ್ತಕವನ್ನೂ ಕೆಳಗೆ ಬಿಟ್ಟು ಬಂದಿರುವೆನು.

ಎಂದು ವೀಣೆಯು ಕುರ್ಚಿಯಿಂದ ಎದ್ದಳು. ಪ್ರಮಥನೂ ಕೂಡಲೇ ಎದ್ದು 'ಯಾವ ಪುಸ್ತಕವು ಬೇಕಾದರೂ ಅಲ್ಲಿರುವುದು. ಅದಕ್ಕಾಗಿ ಹೋಗಲೇಕೆ?' ಎಂದು ಹೇಳುತ್ತಾ ಕೊಠ [illegible]

ವೀಣೆಯು ತುಸು ಸಿಡುಕಿನಿಂದ 'ಅದೇಕೆ ಬಾಗಿಲನ್ನಿಕ್ಕಿದಿರಿ. ನಾನು ಹೋಗಬೇಡವೆ?' ಎಂದಳು.

**ಪ್ರಮಥ**:—ಹೋಗಲೇಕೆ? ಏನಾಗಬೇಕು?

**ವೀಣೆ**:—ನನಗೆ ನಿದ್ದೆಯು ಬರುತ್ತಿದೆ.

ಪ್ರಮಥ—'ಅಷ್ಟೆ ತಾನೆ. ಅದೊ, ದಾಸಿಯು ಹಾಸಿಹೋಗಿರುವಳು. ಇಲ್ಲೇ ಮಲಗಬಹುದು.' ಎಂದು ಕೈ ಹಿಡಿದನು.

ವೀಣೆಯು 'ಇದೇನು? ನೀವೇಕೆ ಹೀಗೆ ನಿರ್ಬಂಧಿಸುವಿರಿ?' ಎಂದೆನ್ನುತ್ತಾ ಕೈಯನ್ನು ಕೊಡಹಿ ಬಾಗಿಲು ತೆರೆಯ ಹೋದಳು. ಪ್ರಮಥನು ಬಾಗಿಲನ್ನು ತಡೆದು 'ವೀಣಾ! ಹೀಗೇಕೆ ಮಾಡುವೆ? ನೀನೇನು ಚಿಕ್ಕ ಹುಡುಗಿಯೇ? ಇಷ್ಟೊಂದು ಕಳವಳವೇಕೆ? ಬಾ! ಇಲ್ಲಿ ಪಲ್ಲಂಗದಲ್ಲಿ ತುಸು ವಿಶ್ರಮಿಸಿ ಹೋಗು' ಎಂದು ತಿರುಗಿ ಕೈಯನ್ನು ಹಿಡಿಯಲು, ವೀಣೆಯು ತಿರುಗಿ ಕೈಯನ್ನೆಳೆಕೊಂಡು ನೆಲದ ಮೇಲೆ ಕುಳಿತುಬಿಟ್ಟಳು. ಅವಳ ಬಾಯಿಂದ 'ಇದೇನೀ ಅತ್ಯಾಚಾರ'ವೆಂಬ ಮಾತೂ ಹೊರಟುಬಿಟ್ಟಿತು.

ಪ್ರಮಥನು ಕೇಳಿ ಅಚ್ಚರಿಗೊಂಡು 'ಅತ್ಯಾಚಾರ! 'ಇದು ಅತ್ಯಾಚಾರವಾದರೆ, ಇಂತಹ ಅತ್ಯಾಚಾರವನ್ನು ನಡೆಸಲಿಕ್ಕಾಗಿಯೇ ನಿನ್ನನ್ನು ಕರೆತಂದಿರುವೆನು ವೀಣಾ!' ಎಂದನು.

ವೀಣೆಯು ಆಗ 'ಕ್ಷಮಿಸಬೇಕು ನಾನೀಗಾಗಲೇ ಯಾವ ಯೋಗ್ಯತಾರಿಕೆಯನ್ನೂ ಬಯಸಿ ಬಂದಿಲ್ಲ. ದಯವಿಟ್ಟು ಹೋಗಗೊಡಿರಿ' ಎಂದಳು.

ಪ್ರಮಥನು ಈ ಸ್ಪಷ್ಟೋಕ್ತಿಯಿಂದ ತುಂಬಾ ಸಂತಪ್ತನಾದನು. ಉಕ್ಕುವ ಹಾಲಿನಂತಿದ್ದ ಆತನ ಪ್ರೇಮತರಂಗಕ್ಕೆ ಸಿರಿಂಜೆಯ ತಣ್ಣೀರೆರಚಿದಂತಾಯ್ತು. ಆಗ ಆತನು 'ವೀಣಾ ದೇವಿ! ಇಷ್ಟು ತೊಂದರೆಗೊಟ್ಟುದಕ್ಕಾಗಿಯೂ ಕ್ಷಮಿಸಬೇಕೆಂ'ದು ಹೇಳಿ ಬಾಗಿಲನ್ನು ತೆರೆದು ಬಿಟ್ಟನು.

---

# ಎರಡನೆಯ ಪರಿಚ್ಛೇದ

ಪ್ರಮಥನ ತಂದೆಯು ಮೇದಿನೀಪುರ ಜಿಲ್ಲೆಯಲ್ಲಿ ಒಂದು ರೈತರ ಸಂಘದ ವ್ಯವಸ್ಥಾಪಕನಾಗಿದ್ದ. ಆತನಿಗೆ ಇಬ್ಬರು ಮಕ್ಕಳು, ಮೊದಲನೆಯವನು ಪ್ರಾಯಕ್ಕೆ ಬಂದು ತೀರಿಹೋಗಿದ್ದನು. ೨ನೇಯವನೇ ಪ್ರಮಥನು. ಪ್ರಮಥನ ವಿದ್ಯಾಭ್ಯಾಸವು ಕಲ್ಕತ್ತೆಯಲ್ಲಿ ನಡೆಯಿತು. ಆದರೆ, ಆತನ ಅಭ್ಯಾಸವು ತೀರುತ್ತದೆನ್ನುವಾಗಲೇ ೧೯೩೫ನೆಯ ವರ್ಷದಲ್ಲಿ ಆತನ ತಂದೆಯು ತೀರಿಕೊಂಡನು. ಆದರೂ ಪ್ರಮಥನು ಇನ್ನೊಂದು ವರ್ಷದಲ್ಲಿ ಅಭ್ಯಾಸವನ್ನು ಪೂರೈಸಿದನು.

ಪ್ರಮಥನ ಆಗಿನ ಅದೃಷ್ಟವು ಚೆನ್ನಾಗಿತ್ತು. ಯಾರೋ ಇಷ್ಟಮಿತ್ರರ ಸಹಾಯದಿಂದ ತೇರ್ಗಡೆಹೊಂದಿ ಸ್ವಲ್ಪ ಸಮಯದಲ್ಲೇ ಆತನಿಗೊಂದು ವೃತ್ತಿಯು ದೊರೆಗಿತು. ತಿಂಗ

ಕಾಲೇಜಿನಲ್ಲಿ ನೂರು ರೂಪಾಯಿಗಳ ಮಾಸಿಕವೇತನವು ಗೊತ್ತಾಗಿ, ಪ್ರಮಥನು ಕಾಲೇಜು ಪ್ರೊಫೆಸರನಾಗಿ ನಿಯಮಿಸಲ್ಪಟ್ಟನು. ಆಗ ಪ್ರಮಥನ ವಯಸ್ಸು ೨೪ ಮಾತ್ರವಾಗಿತ್ತು.

ಪ್ರಮಥನಿಗೆ ಕಾಲೇಜಿನ ವೃತ್ತಿಯು ಗೊತ್ತಾಗಿತ್ತು. ಇನ್ನೂ ಉದ್ಯೋಗವನ್ನು ಕೈಗೊಂಡಿರಲಿಲ್ಲ. ಆತನಿಗೊಮ್ಮೆ ಕಲ್ಕತ್ತೆಯು ಕಡೆಗೆ ತಿರುಗಾಡಿಕೊಂಡು ಬರಬೇಕೆಂದೆನಿಸಿತು. ೧೯೨೭ರ ಬೇಸಿಗೆ (ಎಪ್ರಿಲ್)ಯಲ್ಲಿ ಪ್ರಮಥನು ಕಲ್ಕತ್ತೆಗೆ ಹೊರಟ.

ಪಂಡಿತ ಸೀತಾನಾಥ ತರ್ಕಭೂಷಣನೆಂದರೆ ಕಲ್ಕತ್ತೆಯಲ್ಲಿ ಪ್ರಮಥನ ತಂದೆಗೊಬ್ಬ ಆಪ್ತ ಸ್ನೇಹಿತ. ಪ್ರಮಥನಲ್ಲಿ ಆತನಿಗೆ ತುಂಬಾ ವಾತ್ಸಲ್ಯವಿತ್ತು. ಪ್ರಮಥನು ಕಲ್ಕತ್ತೆಗೆ ಹೋದಲ್ಲಿ ಯಾವಾಗಲೂ ತರ್ಕಭೂಷಣನಲ್ಲೇ ಉಳಕೊಳ್ಳುತ್ತಿದ್ದ. ಪ್ರಮಥನಿಗೆ ಕಾಲೇಜು ವೃತ್ತಿಯು ಗೊತ್ತಾದುದಕ್ಕೆ ತರ್ಕ ಭೂಷಣನಿಗೆ ಸಮಾಧಾನವೆನಿಸಿತು. ಈ ಬಾರಿ ಪ್ರಮಥನು ಒಂದೆಂಟುಹತ್ತು ದಿನಗಳ ವರೆಗೂ ತರ್ಕಭೂಷಣನಲ್ಲಿ ನಿಂತಿದ್ದನು.

ಒಂದು ದಿನ ತರ್ಕಭೂಷಣನಲ್ಲಿಗೊಬ್ಬ ಸಭ್ಯಗ್ರಹಸ್ಥನು ಬಂದ. ಆತನ ಹೆಸರು ನಗೇಂದ್ರ ಕಿಶೋರ ವಿಶ್ವಾಸ. ಆತನು ಅಲೀಪುರದ ಭೂಸಂಬಂಧಿ ದಪ್ತರ ಅಧಿಕಾರಗಳ ದಪ್ತರ (ರಿಕಾರ್ಡ್)ಸಂರಕ್ಷಕನಾಗಿದ್ದ. ತರ್ಕ ಭೂಷಣನ ಸ್ನೇಹಿತನಾಗಿದ್ದುದರಿಂದ ಅವನ ಭೇಟಿಗಾಗಿ ಬಂದಿದ್ದ.

ನಗೇಂದ್ರನು ತನ್ನೊಡನೆ ತನ್ನೊಬ್ಬ ಮಗಳನ್ನು ಕರೆತಂದಿದ್ದ. ಆಕೆಯ ವಯಸ್ಸು ಆಗ ೧೭. ಆಗಲೇ ಎಸ್. ಎಸ್. ಎಲ್ ಸಿ. ತರಗತಿಗೆ ಸೇರತಕ್ಕವಳು. ಹುಡುಗಿಯು ತಕ್ಕಷ್ಟು ರೂಪವತಿಯಾಗಿದ್ದಳಲ್ಲದೆ ವೇಷ-ಭೂಷೆಗಳಿಂದ ತೀರಾ ನವನಾಗರಿಕತೆಯ ಥಳಕು ಬೆಳಕಿನ ಬೆಡಗುಗಾತಿಯಾಗಿಯೂ ಇದ್ದಳು.

ನಮ್ಮ ಪ್ರಮಥನಾಥನ ಮನಸ್ಸು ಚಂಚಲವಾಯಿತು. ಅದು ತರ್ಕಭೂಷಣನಿಗೆ ತಿಳಿಯದಿರಲಿಲ್ಲ. ಆತನಿಗೆ ನಗೇಂದ್ರನ ಸಂಗತಿಯೆಲ್ಲಾ ಗೊತ್ತಿತ್ತು. ಅಲ್ಲದೆ ಆತನಲ್ಲಿ ತುಂಬಾ ಸಲುಗೆಯಿತ್ತು. ತರ್ಕಭೂಷಣನು ಹುಡುಗಿಯ ಮದುವೆ ವಿಚಾರವಾಗಿ ನಗೇಂದ್ರನೊಡನೆ ಪ್ರಸ್ತಾವಿಸಿದ. ನಗೇಂದ್ರನೂ ಯೋಗ್ಯವರರಿದ್ದರೆ ಆರಿಸಿಕೊಡುವಂತೆ ತರ್ಕಭೂಷಣನಿಗೆ ಒತ್ತಾಯಿಸಿದ. ಪ್ರಮಥನ ಆಶೆಯು ಇಷ್ಟು ಸುಲಭವಾಗಿ ಕೂಡಿಬರುವುದೆಂದು ಆತನು ಸ್ವಪ್ನದಲ್ಲಿಯೂ ಯೋಚಿಸಿದ್ದಿಲ್ಲ. ತರ್ಕಭೂಷಣನು ಪ್ರಮಥನಿಗೂ ನಗೇಂದ್ರನಿಗೂ ಪರಸ್ಪರ ಪರಿಚಯುಗಳನ್ನು ಮಾಡಿಕೊಟ್ಟ. ನಗೇಂದ್ರನಿಗೆ ಪ್ರಮಥನಂತಹ ವರನು ದೊರೆವಲ್ಲಿ ತನ್ನ ಮಗಳ ಭಾಗ್ಯವೆಂದೇ ಅನಿಸಿತು.

ಒಂದು ದಿನ ಬೈಠಕುಖಾನೆಯಲ್ಲಿ ಎಲ್ಲರೂ ಉಪಹಾರವನ್ನು ಮಾಡುತ್ತಿದ್ದಾಗ ತರ್ಕಭೂಷಣನು ನಗೇಂದ್ರನನ್ನು ಕುರಿತು 'ವಿಶ್ವಾಸ! ಹಾಗಾದರೆ ನಾವು ಹೀಗೆಯೇ ಕುಳಿತು ಮದುವೆ ಅವತಣವನ್ನುಣ್ಣುವುದಾವಾಗ? ' ಎಂದು ವಿನೋದವಾಡಿದ. ಅದಕ್ಕೆ ನಗೇಂದ್ರನು 'ಎಲ್ಲಾ ನಿಮ್ಮ ಕೈಯಲ್ಲಿದೆ,' ಎಂದ. ಆಗ ತರ್ಕಭೂಷಣನು 'ನಮ್ಮಿಂದ ತಾನೇ ವಿಳಂಬ! ಆವತಣವಿದೆಯೆಂದು ನಿಶ್ಚಯವಾಗಲಿ, ತುಸು ವಿಳಂಬವಾದರೂ ಚಿಂತಿಲ್ಲ'ವೆಂದ.

ತರ್ಕಭೂಷಣನು ನಾನಾರೀತಿಯ ವಿನೋದ ಚೇಷ್ಟೆಗಳಿಂದ ವಧೂ-ವರರನ್ನು ಹತ್ತಿರ ಕುಳ್ಳಿರಿಸಿ ಪರಸ್ಪರ ಉಂಗುರಗಳನ್ನು ತೊಡಿಸಿದ, ಅಂತೂ ಇವರೊಳಗೆ ಮದುವೆಯ ನಿಶ್ಚಯ ವಾಯಿತು. ಆದರೆ ಮದುವೆಯನ್ನು ನೆರವೇರಿಸಲು ಆಗ ಅನುಕೂಲವಿದ್ದಿಲ್ಲ. ನಗೇಂದ್ರನು ಮಗಳ ಎಸ್. ಎಸ್. ಎಲ್. ಸಿ. ಆಗಿಕೊಳ್ಳಲೆಂದ. ಪ್ರಮಥನಿಗೂ ಕಾಲೇಜಿನ ಕೆಲಸವು ಸಮೀಪಿಸಿತ್ತು. ಆದುದರಿಂದ ಸದ್ಯಕ್ಕೆ ಎಲ್ಲರೂ ಅವರವರ ಗೊತ್ತುಗಳಿಗೆ ತಗಲಿದರು. ಪ್ರಮಥನು ಕೃಷ್ಣಗಡಕ್ಕೆ ಬಂದು ಕಾಲೇಜಿನ ಕೆಲಸವನ್ನು ಕೈಗೊಂಡ.

ಒಂದು ದಿನ ಪ್ರಮಥನು ಕಲ್ಕತ್ತೆಯಲ್ಲಿ ಆಕಸ್ಮಿಕವಾಗಿ ತನಗೆ ಘಟಿಸಿದ ವಿಷಯ ವನ್ನು ತನ್ನ ತಾಯಿಯೊಡನೆ ಪ್ರಸ್ತಾಪಿಸಿದ. ಮತ್ತು ವಧುವಿನ ರೀತಿ-ನೀತಿಗಳನ್ನೂ ವಿವ ರಿಸಿ ಹೇಳಿದ. ತಾಯಿಯು ಕೇಳಿ ಅಷ್ಟೊಂದು ಸಂತೋಷಗೊಳ್ಳಲಿಲ್ಲ. ಪ್ರಮಥನಿಗೆ ಅಚ್ಚರಿ ಯಾಯಿತು. ಆತನಿಗೆ ಈ ವಿಚಾರದಲ್ಲಿ ತಾಯಿಯ ಅಭಿಪ್ರಾಯವೇನೆಂದು ತಿಳಕೊಳ್ಳಲು ಕುತೂಹಲವಿತ್ತು. ತಾಯಿಯು ವಿರಸವಾಗಿ ಮಾತನಾಡಿದಳು.

'ಪ್ರಮಥ, ನೀವು ಯುವಕರು! ಹೊರಗಿನ ಥಳುಕಿಗೆ ಮರುಳಾಗುವಿರಿ. ಸಮ್ಯಕ್ತ ವಿಚಾರಮಾಡಲಾರಿರಿ. ಕಲಿತ ಹುಡುಗಿಯರನ್ನಾಳುವುದು ಬಲು ಕಷ್ಟ ಕಾಣಪ್ಪಾ. ಈಗಿನ ವಿದ್ಯೆಯಿಂದ ಹೆಂಗುಸಿಗೆ ಏನು ತಿಳಿಯುತ್ತೆ ಹೇಳು. ಈ ನವನಾಗರಿಕತೆಗೆ ತುತ್ತಾದ ಹುಡುಗಿ ಯರು ಹಿಂದೀಗೃಹಸ್ಥನ ಗೃಹಕೃತ್ಯಕ್ಕೆ ತಕ್ಕವರಲ್ಲ ನೋಡು. ಪಿತ್ರಾರ್ಜಿತ ಹೇರಳವಿದ್ದರೆ ಇವರನ್ನು ಕಟ್ಟಿಕೊಂಡು ವಿಲಾಸವಾಗಿ ಪುಡಿಮಾಡಬಹುದಷ್ಟೆ. ಇವರಲ್ಲಿ ಭಯ-ಭಕ್ತಿ, ನಮ್ರ ವಿನಯಗಳಾವುವೂ ಉಳಿಯುವುದಿಲ್ಲ. ಎಲ್ಲಾದರೂ ವಿರಳವಾಗಿ ಒಬ್ಬೊಬ್ಬಳು ಯೋಗ್ಯಳಿರ ಬಹುದು. ಇನ್ನು ನಿನ್ನ ಪುಣ್ಯ, ನೀನು ಹೇಳುವಂತಿದ್ದರೆ ಆ ಹುಡುಗಿಯು ನಮ್ಮ ಗೃಹಕೃತ್ಯ ಕ್ಕಾಗತಕ್ಕವಳಲ್ಲ. ಸಂಸಾರ ಮಾಡುವವನು ನೀನಷ್ಟೆ. ನಾಳೆಗೆ ಹೇಳಲಿಕ್ಕೆ ಬಾರದು, ಒಳಗೆ ತಪ್ಪವೆಂಬವಂತಹ ಸಂಕಟಕ್ಕೆ ಒಳಗಾದೀಯೇ. ಈಗಿನ ಪೇಟಪಟ್ಟಣದಲ್ಲಿನ ನಾನಾ ರೀತಿಯ ವಿನೋದ ಕೂಟಗಳ ಹವಾ ತಿನ್ನುವ ಪ್ರಾಯದ ಹುಡುಗ ಹುಡುಗಿಯರ ಮನಸ್ಸು ದಿನ ಕ್ಕೊಂದು ರೀತಿಯಾಗುತ್ತಿರುವುದು. ಇರಲಿ, ನೀನಂತೂ ಮಾತುಕೊಟ್ಟಿದ್ದೆನೆನ್ನುವೆ. ನಾನೇನ ಹೇಳಲಿ ?' ಎಂದು ಪ್ರಮಥನ ತಾಯಿಯು ಸ್ಪಷ್ಟವಾಗಿ ಅಂದುಬಿಟ್ಟಳು.

ಅದಕ್ಕೆ ಪ್ರಮಥನು: ಅಮ್ಮಾ! ಕೆಡುವವರು ಹೇಗೂ ಕೆಡುತ್ತಾರೆ ವಿದ್ಯೆಯಿಂದೇನು ಕೆಡುಕು?

**ತಾಯಿ:**— ನಾನೂ ಅದನ್ನೇ ಹೇಳುತ್ತೇನೆ. ಎಷ್ಟೋ ಯೋಗ್ಯ ಹುಡುಗಿಯರು ವಿದ್ಯೆ ಯಿಲ್ಲದಿದ್ದರೂ ನ್ಯಾಯ-ನೀತಿ-ಪತಿಪರಾಯಣರಾಗಿರುತ್ತಾರೆ ವಿದ್ಯೆಯಿಂದಾಗುವುದೇನು?

ಹೀಗೆ ಸ್ವಲ್ಪ ಹೊತ್ತು ತಾಯಿ-ಮಕ್ಕಳೊಳಗೆ ಚರ್ಚೆಯು ನಡೆಯಿತು. ಕೊನೆಗೆ ಪ್ರಮಥನಿಗೆ ಇಂತಹ ನಾಗರೀಕ ಹುಡುಗಿಯರನ್ನು ತರುವುದು ತನ್ನ ತಾಯಿಗೆ ಇಷ್ಟವಿಲ್ಲ ವೆಂದು ತಿಳಿಯಿತು.

ಇವನ್ನೇ ಚಿಂತಿಸಿ ಒಂದು ದಿನ ಪ್ರಮಥನು ನಗೇಂದ್ರನಿಗೆ ಆತನ ಮಗಳನ್ನು ತಾನು ವರಿಸುವುದು ಸಂದೇಹವೆಂದು ಪತ್ರ ... [illegible]

ಗೊಂಡು ಈಗಲೇ ಅನುಕೂಲವಿಲ್ಲದಿದ್ದಲ್ಲಿ ಎಂದು ಬೇಕಾದರೂ ಆಗಲೆಂದು ಮಾತುಗೊಟ್ಟು ತನ್ನನ್ನು ನಿಮ್ಮಂತಹರು ವಂಚಿಸುವದು ಸರಿಯಲ್ಲವೆಂದೂ ಉತ್ತರವನ್ನು ಬರೆದ. ಹೀಗೇ ಸಂದೇಹ-ನಿಶ್ಚಯಗಳಿಂದಲೇ ತಿಂಗಳುಗಳ ಮೇಲೆ ತಿಂಗಳೆಂದು ಎರಡು ವರ್ಷಗಳೂ ಸಂದುವು. ಆದರೂ ಪ್ರಮಥನು ಈ ಸಂಬಂಧವನ್ನು ಬಿಡಲಾರದವನಾದ ತರ್ಕಭೂಷಣನ ಪತ್ರವೂ ಆತನನ್ನು ಒತ್ತಾಯಿಸಿತು.

೧೯೨೮ರ ಅಗಸ್ಟಿನಲ್ಲಿ ಮದುವೆಯು ನಿರ್ಧಾರವಾಯಿತು. ಈ ಸಮಯ ನಗೇಂದ್ರನು ಕಲ್ಕತ್ತೆಯ ಭವಾನೀಪುರದ ರಾಜೇಂದ್ರ ಬೀದಿಯಲ್ಲಿ ವಾಸಿಸುತ್ತಿದ್ದ. ವಧುವಾದ ವೀಣಾದೇವಿಯು ಆಗ ಡಾಯಿಸನ್ ಕಾಲೇಜಿನಲ್ಲಿ ಇಂಟರ್ ಕ್ಲಾಸಿನಲ್ಲಿ ಓದುತ್ತಿದ್ದಳು. ಆಗ ಅವಳ ವಯಸ್ಸು ೧೯ ತುಂಬಿತ್ತು. ಮದುವೆಯು ಭವಾನಿಪುರದ ಬ್ರಹ್ಮಸಮಾಜ ಮಂದಿರದಲ್ಲಿ ತಾರೀಕು ೪-೧೦-೨೮ರಲ್ಲಿ ಸಿವಿಲ್ ಮೆರಿಜ್ ಆಕ್ಟಿನಂತೆ ನಡೆಯಿತು. ಆಮಂತ್ರಿತರಾದ ಬಂಧು-ಮಿತ್ರರಲ್ಲಿ ಪ್ರೊ। ಶಿಶೀರ ಕುಮಾರ ಮಿತ್ರನೂ, ಬಾಬೂ ವಿಭೂತೀ ಭೂಷಣ ಸರಕಾರನೂ ಮದುವೆಯ ಸಾಕ್ಷಿಗಳಾಗಿದ್ದರು.

ಮದುವೆಯ ಕ್ರಮವೆಲ್ಲಾ ಸಾಂಗವಾಗಿ ನಡೆಯಿತು. ಬಂಧು-ಮಿತ್ರರೆಲ್ಲರೂ ಒಬ್ಬೊಬ್ಬರಾಗಿ ಹೊರಟುಹೋದರು. ಪ್ರಮಥನು ಸಪ್ತೋಢೆಯನ್ನು ಕರಕೊಂಡು ಊರಿಗೆ ಹೊರಡಲು ಮಾವನೊಡನೆ ಕೇಳಿಕೊಂಡುದಕ್ಕೆ ನಗೇಂದ್ರನು ಆಗಲೆಂದ. ವಧುವು ಕಾಲೇಜಿನಲ್ಲಿ ಓದುತ್ತಿದ್ದುದರಿಂದ ಒಂದು ವಾರದ ರಜೆಯನ್ನು ಪಡಕೊಂಡು ಸಪತ್ನೀಕನಾಗಿ ಪ್ರಮಥನು ಕೃಷ್ಣಗಡಕ್ಕೆ ಹೊರಟು ಬಂದ.

ವಿದ್ಯಾವಂತಳೂ ಯುವತಿಯೂ ಆದ ಪತ್ನಿಯ ಅಂತರಂಗಪ್ರೇಮದ ಸವಿಯನ್ನುಣ್ಣುವ ಆತುರವು ಆತನಿಗೆ ಬಲವಾಗಿತ್ತು. ಆತನು ಎಷ್ಟೋ ಪತಿಧುರಂಧರೆಯರಾದ ನಾರೀಮಣಿಗಳ ರೀತಿ-ನೀತಿಗಳನ್ನು ಕಂಡು-ಕೇಳಿದ್ದನು. ಅಂತೆಯೇ ತನ್ನ ಪ್ರೌಢಪತ್ನಿಯೂ ತನ್ನನ್ನು ಹೃದಯವನ್ನಿತ್ತು ಆರಾಧಿಸಲು ಹಾತೊರೆಯುತ್ತಿರಬಹುದೆಂದು ಆತನ ಹಂಬಲವಿತ್ತು. ಆದರೆ, ಕೃಷ್ಣಗಡದಲ್ಲಿದ್ದೊಂದು ವಾರದಲ್ಲಿ ಆತನು ತನ್ನ ಆತುರವನ್ನು ತಣ್ಣೀರಿನಿಂದ ತಣಿಸಬೇಕಾಯಿತೆಂಬುದನ್ನು ವಾಚಕರು ಬಲ್ಲರು.

---

## ಮೂರನೆಯ ಪರಿಚ್ಛೇದ

ವೀಣೆಯ ಅಂದಿನ ತಿರಸ್ಕಾರದಿಂದ ಪ್ರೊಫೆಸರ್ ಪ್ರಮಥನಾಥನು ಒಮ್ಮೆ ಸಂತಾಪಗೊಂಡನು. ಆದರೂ ಪ್ರಮಥನು ಕಠಿನಹೃದಯನಾಗಿದ್ದಿಲ್ಲ. ಆತನು ತುಂಬಾ ದಯ-ದಾಕ್ಷಿಣ್ಯಶೀಲನಾಗಿದ್ದನು. ಆತನು ವೀಣೆಯ ತಿರಸ್ಕಾರವನ್ನು ಅಷ್ಟೊಂದು ಪರಿಗಣಿಸಲಿಲ್ಲ. ಆದರೆ, ಆಕೆಯ ಸ್ವಭಾವವು ಇಷ್ಟು ನಿಷ್ಠುರವಾದುದೇ? ಎಂದು ಆತನಿಗೆ ಆಶ್ಚರ್ಯವೆನಿಸಿತು. ಆತನು ಕಲ್ಕತ್ತೆಯಲ್ಲಿ ತರ್ಕಭೂಷಣನ ಮನೆಯಲ್ಲಿ ಅಂದು ಕಂಡಾಗ ಅವಳು ಇಷ್ಟು ನಿಷ್ಠುರಳಾಗಿರಬಹುದೆಂದೆಣಿಸಿರಲಿಲ್ಲ. ಅಂದಿನಿಂದ ಇಂದಿಗೆ ಇಷ್ಟು ಸ್ವಭಾವ ಪರಿವರ್ತನೆ

ಯಾಗಲು ಕಾರಣವೇನೆಂದು ಪ್ರಮಥನಿಗೆ ತಿಳಿಯದಾಯಿತು. ಕೊನೆಗೆ ತಾನೇ ಅಷ್ಟು ಆತುರ ಗೊಂಡುದು ತಪ್ಪೆಂದೂ ಆತನಿಗನಿಸಿತು. ಏನೇನೂ ಸಮಾಧಾನ ಮಾಡಿಕೊಂಡು ಒಂದು ವಾರವನ್ನು ಕೃಷ್ಣಗಡದಲ್ಲಿ ಕಳೆದು ವೀಣೆಯನ್ನು ಕಲ್ಕತ್ತೆಗೆ ಕಳುಹಿಸಿಕೊಟ್ಟು ಬಂದನು.

ಏಳು ತಿಂಗಳುಗಳು ಸಂದವು. ಬೇಸಿಗೆಯ ರಜೆಯಲ್ಲಿ ಪ್ರಮಥನು ಕಲ್ಕತ್ತೆಗೆ ಹೊರಟು ಇಂಟರ್ ತೀರುವ ವರೆಗೆ ವೀಣೆಯು ತಂದೆಯ ಮನೆಯಲ್ಲೇ ಇರುವುದಾಗಿಯೂ ಆ ಮೇಲೆ ಕೃಷ್ಣಗಡದಲ್ಲಿ ಬಂದಿರುವುದಾಗಿಯೂ ವೀಣಾ-ಪ್ರಮಥರೊಳಗೆ ನಿರ್ಣಯವಾಗಿತ್ತು. ಆದುದ ರಿಂದ ಆಕೆಯನ್ನು ಕರೆತರಬೇಕೆಂದು ಪ್ರಮಥನು ತುಂಬಾ ಉತ್ಸಾಹದಿಂದ ಹೊರಟ. ಮಾವನ ಮನೆಯನ್ನು ತಲುಪಿ ನಾಲ್ಕು ದಿನ ಅಲ್ಲಿದ್ದ.

ಒಂದು ದಿನ ಹೊರಗೆ ಅಡ್ಡಾಡಲು ಹೋಗಿದ್ದಾಗ ಒಂದು ಮೋಟಾರುಕಾರನ್ನು ಕಂಡು ಕುತೂಹಲಗೊಂಡ. ಅದರಲ್ಲಿ ವೀಣೆಯು ಕುಳಿತಿದ್ದಳು. ಯಾರ ಮೋಟರೋ ಯಾರು ಕರೆದೊಯ್ಯುವರೋ ಎಂದು ಯಾರಿಗೂ ತಿಳಿಯದು. ಪ್ರಮಥನು ಅದೇ ಮೋಟಾ ರುಕಾರಿನಲ್ಲಿ ಅನೇಕ ವೇಳೆ ವೀಣೆಯನ್ನು ಕಂಡನು.

ಹಿಂಪಕ್ಕೆ ವೀಣೆಯನ್ನು ಬಿಟ್ಟು ಹೋಗಬಂದಾಗಲೂ ನಾಲ್ಕು ದಿನಗಳಲ್ಲೇ ಆಕೆಯು ಎಷ್ಟೋ ತಿರುಗಾಟಗಳನ್ನು ಮಾಡಹತ್ತಿದ್ದಳು. ಆವರೆ, ಇಂದದು ಮಿತಿಮೀರುತ್ತದೆ. ಪ್ರಮ ಥನನ್ನು ಆಕೆಯು ಯಾವುದೊಂದು ರೀತಿಯಲ್ಲೂ ಪುರಸ್ಕರಿಸಲಿಲ್ಲ. ಪತ್ನಿಯು ತನ್ನನ್ನು ಹೀಗೆ ಅಗೌರವಿಸುವುದಾತನ ಹೃದಯದಲ್ಲೊಂದು ಅವರ್ಣನೀಯವಾದ ವೇದನೆಯನ್ನುಂಟು ಮಾಡಹತ್ತಿತು.

ನಗೇಂದ್ರನ ಮನೆಗೆ ಒಬ್ಬ ಶ್ರೀಮಂತವ್ಯಕ್ತಿಯು ಆಗಾಗ ಬಂದು ಹೋಗುತ್ತಿದ್ದನು. ಈತನನ್ನು ಪ್ರಮಥನು ಹಿಂದೆ ಬಂದಾಗಲೂ ಒಂದೆರಡು ಬಾರಿ ಕಂಡಿದ್ದನು. ಈ ವ್ಯಕ್ತಿಯು ನಗೇಂದ್ರನಿಗೆ ಸ್ವಲ್ಪ ಸಂಬಂಧಿಯೂ ಆಗಿದ್ದನು. ಶ್ರೀಮಂತನು ಮೋಟಾರು ಕಾರಿನಿಂದಲೇ ಬಂದು ಹೋಗುತ್ತಿದ್ದನು. ಆತನು ಶ್ರೀಮಂತನೂ ಸಂಬಂಧಿಕನೂ ಆಗಿದ್ದುದರಿಂದ ನಗೇಂ ದ್ರನ ಮನೆಗೆ ಇಷ್ಟಬಂದಾಗ ಯಾರ! ಹಂಗೂ ಇಲ್ಲವೆ ಬರುತ್ತಲೂ ಹೋಗುತ್ತಲೂ ಇದ್ದನು. ವಿದ್ಯಾವಂತನಾದ ಆತನನ್ನು ಸಂಭಾಷಿಸಿ ಉಪಚರಿಸಿ ಕಳುಹಿಸುವ ಭಾರವು ವೀಣೆಯ ಪಾಲಿ ನದ್ದೇ ಆಗಿತ್ತು. ಸಂಬಂಧಿಕನಾದುದರಿಂದ ಆತನು ವೀಣೆಯೊಡನೆ ತುಂಬಾ ಸಲುಗೆಯಿಂದ ಮಾತನಾಡುತ್ತಿದ್ದ. ಒಮ್ಮೊಮ್ಮೆ ಹರಟೆಹೊಡೆಯುತ್ತಾ ಕುಳಿತನೆಂದರೆ ರಾತ್ರಿ ೧೧ ಘಂಟೆಯ ವರೆಗೂ ನಗೇಂದ್ರನ ಮನೆಯಲ್ಲಿರುತ್ತಿದ್ದ.

ಮದುವೆಯ ಸಮಯ ಹೆಣ್ಣಿನ ಕಡೆಯ ಒಬ್ಬ ದೊಡ್ಡ ಮನುಷ್ಯನು ಬಂದಿಲ್ಲವೆಂದ ಎಲ್ಲ ಬಂಧುಗಳು ಹಲುಬುತ್ತಿದ್ದರು. ಆದರ ಆತನ ಹೆಸರಿನಿಂದೊಂದು ಅಮೂಲ್ಯವಾದ ಉಡುಗೊರೆಯು ಬಂದೇ ಇತ್ತು. ಬಹಳವಾಗಿ ಆ ದೊಡ್ಡ ಮನುಷ್ಯನು ಈತನೇ ಇದ್ದಿರಬ ಹುದೆಂದು ಪ್ರಮಥನು ಊಹಿಸಿದನು. ಒಂದು ದಿನ ಪ್ರಮಥನು ಆ ದೊಡ್ಡ ಸಂಬಂಧಿಕ ನಾರೆಂದು ಕೇಳಿದ ಕೆ, ವೀಣೆಯು ಆತನು 'ಬಡಾ ಕಾಕಾ' ಎಂದಳು ... ವೀಣೆಯು ...

ಕಾಕಾನ ಆಶ್ರಯ ಬೋಧನೆಗಳಿಂದಲೇ ಇಷ್ಟು ಗಡುಸಾಗಿರುವಳೆಂದು ಪ್ರಮಥನಿಗೆ ನಿಶ್ಚಯವಾಯಿತು.

ಒಂದು ದಿನ ಪ್ರಮಥನು ವೀಣೆಯ ಕೊಠಡಿಯನ್ನು ಸಂದರ್ಶಿಸಿದ. ಎದುರಿಗೇ ಆಕೆಯ ಒಂದು ಪುಸ್ತಕವು ಸಿಕ್ಕಿತು. 'ರಮೇಶದಾರ ಆತ್ಮಕಥೆ' ಎಂದು ಅದರ ಹೆಸರು ಕಾಣಿಸಿತ್ತು ಕುತೂಹಲದಿಂದ ಅದನ್ನು ತುಸು ಓದತೊಡಗಿದ. ಅದರಲ್ಲೇನನ್ನು ಓದಿದನೋ ನಮಗರಿಯದು. ಅದರಿಂದ ವೀಣೆಯ ಬುದ್ಧಿಯು ತೀರ ಕಲುಷಿತವಾಗಿರಬೇಕೆಂದೂ ಆಕೆಯ ಚರ್ಯೆಯೂ ನಿರ್ಮಲವಾಗಿರಲಾರದೆಂದೂ ಆತನ ಮನಸ್ಸಿಗನಿಸಿತು. ಆ ಮೇಲೊಂದು ದಿನ ವೀಣೆಯೊಬ್ಬಳೇ ತನ್ನ ಕೊಠಡಿಯಲ್ಲಿ ಕುಳಿತಿರುವಾಗ ಪ್ರಮಥನು ಒಳಹೊಕ್ಕು 'ವೀಣಾ! ನಿನಗೆ ತುಸು ಸೂಚನೆಯೊಂದು ತಕ್ಕುದಿದೆ' ಎಂದನು. ವೀಣೆಯು 'ಅದೇ'ನೆಂದಳು.

ಪ್ರಮಥನಾಗ 'ನೋಡು ಆ ಬಡಾ ಕಾಕಾನೊಡನೆ ಅಷ್ಟೊಂದು ಸೇರಕೂಡದು. ಆತನು ಅಷ್ಟೊಂದು ಸಂಭಾವಿತನಾಗಿ ಕಾಣುವುದಿಲ್ಲ' ವೆಂದನು.

ಆಗ ವೀಣೆಯು 'ಏನು? ಆತನ ಯೋಗ್ಯತೆಯು ಬಲು ದೊಡ್ಡದು. ಆತನನ್ನು ತಿರಸ್ಕರಿಸಬೇಕೆನ್ನುವಿರಾ? ' ಎಂದಳು. ಆ ಮೇಲೇನೇನೊ ಮಾತುಗಳು ಅವರೊಳಗೆ ನಡೆದುವು. ವೀಣೆಯು ಅಂದೇ ಬಡಾಕಾಕಾನ ಮೋಟರಿನಿಂದ ಸಿನೇಮಾ ನೋಡಲಿಕ್ಕೆ ಹೋದವಳು ರಾತ್ರಿ ೧೧ ಘಂಟೆಯಾದರೂ ಹಿಂದಿರುಗಲಿಲ್ಲ.

ಕೆಲದಿನಗಳ ಮೇಲೆ, ಪ್ರಮಥನು ವೀಣೆಯನ್ನು ಕೃಷ್ಣಗಡಕ್ಕೆ ಕರತಂದ. ಆಗಲೂ ಆಕೆಯು ಪ್ರಮಥನನ್ನು ಆದರಿಸಲಿಲ್ಲ. ಯಾವಾಗಲೂ ಆಕೆಯು ಬಡಾ ಕಾಕಾನ ಪತ್ರಗಳನ್ನಿಮರು ನೋಡುತ್ತಿದ್ದಳು. ಒಂದ ಪತ್ರಗಳನ್ನು ಪ್ರಮಥನು ನೋಡಿದರೆ ಸಿಟ್ಟುಗೊಳ್ಳುತ್ತಿದ್ದಳು. ಆಕೆಯ ಹೃದಯವೆಂತಹುದೊ ಪ್ರಮಥನಿಗೆ ತಿಳಿಯಲೊಲ್ಲದು.



# ನಾಲ್ಕನೆಯ ಪರಿಚ್ಛೇದ

ಒಂದು ದಿನ ಸಂಜೆಯ ಹೊತ್ತು, ವೀಣೆಯು ತಂದೆಯ ಮನೆಯಲ್ಲೇ ಇದ್ದಾಳೆ. ಪ್ರಮಥನಿಗೆ ಇಷ್ಟವಿಲ್ಲದಿದ್ದರೂ ಆಕೆಯು ಬಿ. ಎ. ಗೆ ಸೇರಿದ್ದು ಸದ್ಯಕ್ಕೆ ಏಳೆಂಟು ತಿಂಗಳು ಸಂದುಹೋದುವು. ಒಂದು ದಿನ ಸಂಜೆಯ ಹೊತ್ತು- ರಾಜೇಂದ್ರ ಬೀದಿಯಲ್ಲಿ ವೀಣೆಯ ಮನೆಯ ಮುಂದೆ ಒಂದು ಮೋಟಾರುಕಾರು ಒಂದು ನಿಂತಿತು. ವೀಣೆಯು ಕೂಡಲೇ ಅಲಂಕೃತಳಾಗಿ ಬಂದು ಕಾರನ್ನು ಹತ್ತಿದಳು. ಕಾರು ಬಂಗಾಳ ಕಟ್ಟಡ (Bengal Buildings) ದ ಮುಂದೆ ಹೋಗಿ ನಿಂತಿತು. ವೀಣೆಯು ಕಾರಿನಿಂದಿಳಿದು ಮಹಡಿಯನ್ನು ಹತ್ತಿದಳು. ಮಹಡಿಯಲ್ಲಿ ಅನೇಕ ಕೊಠಡಿಗಳಿದ್ದವು. ಒಂದು ವಿಶೇಷ ರೀತಿಯ ಕೊಠಡಿಯ ಹತ್ತಿರ ಹೋದಾಗ ಒಬ್ಬ ಯುವಕನು ಎದುರು ಬಂದು ಹಸ್ತಲಾಘವವನ್ನಿತ್ತು ವೀಣೆಯನ್ನು ಕೊಠಡಿಯೊಳಗೆ ಕರಕೊಂಡುಹೋದನು.

ಬಾಬೂ ಸುರೇಶಚಂದ್ರ ಪಾಲನು ಕಲಿಕತ್ತೆಯಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿದ್ದನು. ಕಲಿಕತ್ತೆಯ ಪೌರಸಭಾಧ್ಯಕ್ಷ ಪದವಿಯು ಸಾಮಾನ್ಯವಾದುದಲ್ಲ. ಅಂದ ಮೇಲೆ ಸುರೇಶಚಂದ್ರನ ಪತಿಷ್ಠೆಯನ್ನು ಕೇಳುವುದೇನು? ಆತನು ಬಂಗಾಳ ವಿಮಾಕಂಪೆನಿಯ ಒಬ್ಬ ಮುಖ್ಯ ಕಾರ್ಯಕರ್ತನೂ ಆಗಿದ್ದನು. ವೀಣೆಯನ್ನು ಕೊಠಡಿಯೊಳಗೆ ಕರೆದೊಯ್ದು ಆಕೆಯ ಎರಡೂ ಕೈಗಳನ್ನು ಹಿಡಿದುಕೊಂಡು ಮಂದಹಾಸದಿಂದ 'ವೀಣಾ! ಏನನ್ನು ನಿರ್ಧರಿಸಿದೆ' ಎಂದು ಕೇಳಿದನು.

**ವೀಣೆ:**—ಹೋಗಿ ಬರಲು ಎಷ್ಟು ದಿನಗಳು ಹಿಡಿಯುವುವು?

**ಸುರೇಶ:**—ಅದನ್ನೀಗ ಹೇಗೆ ಹೇಳಲಿ.

ಸುರೇಶನು ಮುಗುಳು ನಗುತ್ತಾ 'ಎಷ್ಟು ದಿನಗಳಲ್ಲಿ ಸ್ವಾಸ್ಥ್ಯವು ಸುಧಾರಿಸುವುದೋ ಹೇಳು ನೋಡುವಾ' ಎಂದನು.

ವೀಣೆಯು ತೀಕ್ಷ್ಣವಾದ ಕಟಾಕ್ಷವನ್ನು ಬೀರಿ 'ಅದೆಲ್ಲಾ ನಿಮಗೇ ಗೊತ್ತು' ಎಂದಳು. ಆಗ ಸುರೇಶಚಂದ್ರನು 'ಇರಲಿ, ವೀಣಾ! ಉತ್ತರವು ಬಂದಿತೇ?' ಎಂದನು.

**ವೀಣೆ:**—ಬಂದಿದೆ. ನಮ್ಮೊಡನೆ ಇನ್ನಾರು ಹೋಗುತ್ತಾರೆಂದು ಕೇಳಿದ್ದಾರೆ.

ಸುರೇಶಚಂದ್ರನು ವ್ಯಂಗ್ಯವಾಗಿ ನಕ್ಕುಬಿಟ್ಟನು.

ವೀಣೆಯು 'ನಗುವಿರೇಕೆಂ'ದಳು;

ಸುರೇಶಚಂದ್ರನು 'ವೀಣಾ! ಎಲ್ಲವನ್ನೂ ಕಟ್ಟಿಡು. ನಾಳೆಯೇ ಹೊರಟುಬಿಡುವ. ಎಲ್ಲಾ ಸಿದ್ಧವಾಗಿದೆ' ಎಂದನು.

ವೀಣೆಯು ತಿರುಗಿ 'ಎಷ್ಟು ದಿನಗಳಲ್ಲಿ ಹಿಂದಿರುಗಬಹುದು?' ಎಂದು ಕೇಳಿದಳು.

ಕೊಠಡಿಯ ಬಾಗಿಲು ಇಕ್ಕಿತ್ತು. ಸುರೇಶಚಂದ್ರನು ಆಕೆಯ ಪ್ರಶ್ನೆಯನ್ನು ಗಮನಿ

ದಿನಗಳಾದರೆ ನಿನಗೇನು? ದೇಶಸಂಚಾರವು ವಿದ್ಯೆಯ ಒಂದು ಅಂಗ. ಎಲ್ಲವನ್ನೂ ನೋಡಿಕೊಂಡು ಆದಷ್ಟು ಬೇಗನೇ ಹೊರಟುಬರುವ' ಎಂದನು.

**ವೀಣೆ:**—ಹಾಗಾದರಾಗಲಿ.

ಸುರೇಶಚಂದ್ರನು 'ಸಂತೋಷ'ವೆನ್ನುತ್ತಾ ಆಕೆಯ ಕೋಮಲಹಸ್ತವನ್ನು ಬರಸೆಳೆದು ಚುಂಬಿಸಿದನು; ವೀಣೆಯು ಲಜ್ಜೆಯಿಂದೆಳಕೊಂಡ ತಪ್ಪಿಗೆ ಇನ್ನಷ್ಟು ಶಿಕ್ಷೆಯನ್ನನುಭವಿಸಬೇಕಾಯಿತು. ಅಂತೂ ವೀಣೆಯು ಸುರೇಶಚಂದ್ರನೊಡನೆ ಹವಾ ಬದಲಾವಣೆಗಾಗಿ ದಿಲ್ಲಿಗೆ ಹೋಗುವ ನಿರ್ಧಾರವನ್ನು ಮಾಡಿದಳು. ವೀಣೆಯು ಹವಾ ಬದಲಾವಣೆಗೆ ಹೋಗುವ ವಿಷಯವು ಪ್ರಮಥನಾಥನಿಗೆ ಬರೆಯಲ್ಪಟ್ಟಿತು. ಆತನು ಕಿಶೋರಗಂಜಿಗೆ ಹೋಗಬಹುದೆಂದು ಉತ್ತರವನ್ನು ಬರೆದನು. ವೀಣೆಯ ಚಿಕ್ಕಪ್ಪನೊಬ್ಬನು ಕಿಶೋರಗಂಜಿನಲ್ಲಿದ್ದನು. ಪ್ರಮಥನು ಅಲ್ಲಿ ಹೋಗಿ ಕೆಲದಿನವಿದ್ದು ಬರಬಹುದೆಂದು ಬರೆದಿದ್ದನು. ಆದರೆ, ವೀಣೆಯು ಕಿಶೋರಗಂಜಗೆ ಹೋಗಲಿಕ್ಕೆ ಅನುಕೂಲವಿಲ್ಲವೆಂದೂ, ಬಡಾಕಾಕಾರೊಡನೆ ದಿಲ್ಲಿಗೆ ಹೋಗಿಬರುತ್ತೇನೆಂದೂ ತಂದೆಯಿಂದ ತಿರುಗಿ ಪ್ರಮಥನಿಗೆ ಪತ್ರವನ್ನು ಬರೆಯಿಸಿದ್ದಳು. ಅದಕ್ಕೆ ಪ್ರಮಥನು ಉತ್ತರದಲ್ಲಿ ಬಡಾಕಾಕಾರೊಡನೆ ಬೇರಾರು ಹೋಗುತ್ತಾರೆಂದು ತಿರುಗಿ ಕೇಳಿದ್ದ. ಅದರ ಮೇಲೆ ಯಾವ ಉತ್ತರ ಪ್ರತ್ಯುತ್ತರಗಳು ನಡೆಯಲಿದ್ದುವೋ ತಿಳಿಯದು. ಅಷ್ಟರಲ್ಲೇ ವೀಣೆಯು ಮೇಲ್ಕಂಡಂತೆ ದಿಲ್ಲಿಗೆ ಹೋಗುವುದನ್ನು ನಿರ್ಧರಿಸಿಬಿಟ್ಟಳು. ಬಾಬೂ ಸುರೇಶಚಂದ್ರನೇ ಆಕೆಯ ಬಡಾಕಾಕಾ ಆಗಿದ್ದರೆಂದು ವಾಚಕರು ಈಗ ತಿಳುಕೊಂಡಿರಬಹುದು.

ಸುರೇಶಚಂದ್ರನೂ ವೀಣೆಯೂ ದಿಲ್ಲಿಗೆ ಹೊರಟುಬಂದು ಸೇರಿದರು. ಅವರೊಡನೆ ಮೋಟಾರು ಡ್ರೈವರನೇ ಮೊದಲಾಗಿ 3–4 ಮಂದಿ ಚಾಕರ್‌ವರ್ಗದವರಿದ್ದರಲ್ಲದೆ ಬೇರಾರೂ ಇದ್ದಿಲ್ಲ. ದಿಲ್ಲಿಯಲ್ಲಿ ರಾಜಾಜಯಸಿಂಹ ಚೌಧುರಿಯ ಬಂಗ್ಲೆಗಳಿಗೆ ಸೇರಿದ್ದೊಂದು ಬಂಗ್ಲೆಯಲ್ಲಿ ನಮ್ಮ ಪ್ರವಾಸಿಗಳು ಬಿಡಾರವನ್ನು ಮಾಡಿದರು. ಹಾಗೂ ದಿಲ್ಲಿಯ ವಿವಿಧ ವಿನೋದವನ್ನನುಭವಿಸತೊಡಗಿದರು. ಆಗ 31ನೇ ಇಸವಿಯ ಫೆಬ್ರವರಿಯು ನಡೆಯುತ್ತಿತ್ತು.

---

## ಐದನೆಯ ಪರಿಚ್ಛೇದ

ಇತ್ತ ಪ್ರಮಥನ ಮನಸ್ಸು ದಿನದಿಂದ ದಿನಕ್ಕೆ ಕೆಡಹತ್ತಿತು. ವಿದ್ಯಾವಂತ ಪ್ರೌಢ ಪತ್ನಿಯಿಂದ ಸಂಸಾರವನ್ನೇ ಸ್ವರ್ಗವಾಗಿ ಮಾಡಬೇಕೆಂದಿದ್ದ ಆತನ ಹಂಬಲವು ಈ ಜನ್ಮದಲ್ಲೇ ಕೂಡಿಬರುವಂತೆ ಕಾಣುವುದಿಲ್ಲ. ಆತನಿಗೆ ಸಂಕಟಕ್ಕೆ ಬಂದಿತು. ಮನೆಯಲ್ಲಿ ಮುದುಕಿಯಾದ ವಿಧವೆ ತಾಯಿ. ಮನೆಗೆಲಸವನ್ನೆಲ್ಲಾ ಅವಳೇ ಮಾಡಬೇಕಾಗಿತ್ತು. ಪ್ರಮಥನು ಯಾರಾದರೂ ಅನಾಥ ಹೆಂಗಸರು ಮನೆಯಲ್ಲಿ ಕೆಲಸಕ್ಕೆ ನಿಲ್ಲುವರೋ ಎಂದು ವಿಚಾರಿಸಿದನು. ಯಾರೂ ದೊರಕಲಿಲ್ಲ. ಅಲ್ಲದೆ, ವಯಸ್ಸಾದ ಹೆಂಡತಿಯಿದ್ದು ಗೃಹಸ್ಥರು ಬೇರೆ ಹೆಂಗುಸರನು ಹುಡುಕುವುದು ಸಂಸಾರಿಗಳ ದೃಷ್ಟಿಯಿಂದ ಅಗೌರವ

ಮತ್ತು ಅನಾವ್ರಯ. ಮೊದಲನೆಯದಾಗಿ ಹಾಗೆ ಹೊರಗಿನ ಹೆಂಗುಸರನ್ನು ಇಟ್ಟುಕೊಳ್ಳುವುದು ಪ್ರಮಥನ ತಾಯಿಗೂ ಸಮ್ಮತಿಯಿಲ್ಲ ಆದರೆ ಈ ಕುರಿತು ಪ್ರಮಥನು ತಾಯಿಯೊಡನೆ ಹೆಚ್ಚು ಮಾತನಾಡಲೂ ಸಂಕೋಚಪಡುತ್ತಿದ್ದನು. ತನ್ನ ಪತ್ನಿಯಿಂದ ಗೃಹಕೃತ್ಯಕ್ಕೆ ಏನೂ ಉಪಕಾರವಾಗದಿದ್ದುದಕ್ಕಾಗಿ ಪ್ರಮಥನಿಗೆ ನಾಚುಗೆಯಾಗುತ್ತಿತ್ತು. ಅಥವಾ ಗೃಹಕೃತ್ಯದ ಮಾತಂತಿರಲಿ, ತಾನೂ ಉಪಭೋಗಿಸಲಾರದ ವಸ್ತುವಿನ ಹವ್ಯಾಸಕ್ಕೆ ಬಿದ್ದುದಕ್ಕಾಗಿ ಆತನಿಗೆ ಸಂತಾಪವೇ ಹೆಚ್ಚುತ್ತಿತ್ತು. ನಂಟರಿಷ್ಟರು ಮನೆಗೆ ಬಂದಾಗ ಆತನಿಗೂ ಆತನ ತಾಯಿಗೂ ತುಂಬಾ ಕರಕರೆಯಾಗುತ್ತಿತ್ತು. ಪ್ರಮಥನು ತುಂಬಾ ಸಂತಾಪದಿಂದ ದಿನಗಳನ್ನು ನೂಕುತ್ತಿದ್ದನು.

ಅಂದು ಭಾನುವಾರ. ಪ್ರಮಥನು ಮಾಧ್ಯಾಹ್ನಿಕಗಳನ್ನು ತೀರಿಸಿ ಮಹಡಿಯ ಮೇಲೆ ಒಂದು ಸುಖಾಸನದಲ್ಲಿ ಒರಗಿದ್ದನು. ಅಷ್ಟರಲ್ಲಿ ಟಪ್ಪಾಲು ಜವಾನನು ಕೆಳಗಿಂದ ಕೂಗಿ ಕಾಗದ ಪತ್ರಗಳನ್ನಿಟ್ಟು ಹೋದನು. ಪ್ರಮಥನು 'ಪ್ರಫುಲ್ಲಾ!' ಎಂದು ಕೂಗುವಷ್ಟರಲ್ಲಿ ಪ್ರಫುಲ್ಲನು ಬಂದಿದ್ದ ಕಾಗದಪತ್ರಗಳನ್ನು ಮೇಲಕ್ಕೆ ಒಯಿದು ಕೊಟ್ಟುಬಂದನು. ಪ್ರಫುಲ್ಲನು ಪ್ರಮಥನ ಅಣ್ಣನ ಮಗನು. ವಯಸ್ಸು ಸಾಧಾರಣ 15--16 ಇರಬಹುದು. ಪ್ರಮಥನಿಗೆ ಆತನಲ್ಲಿ ತುಂಬಾ ವಾತ್ಸಲ್ಯವಿತ್ತು.

ಬಂದಿದ್ದ ಕಾಗದ ಪತ್ರಗಳಲ್ಲಿ ಒಂದನ್ನು ಕುತೂಹಲದಿಂದ ಪ್ರಮಥನು ಒಡೆದು ಓದಿದನು. ಓದಿ ಸಂತಪ್ತನಾದನು.

ಅದು ಸುರೇಶಚಂದ್ರನು ಬರೆದ ಪತ್ರವಾಗಿತ್ತು. ಸ್ವಾಸ್ಥ್ಯಸುಧಾರಣೆಗಾಗಿ ವೀಣೆಗೆ ಬೇರೆ ಕಡೆ ಹೋಗುವ ಅವಶ್ಯವುಂಟಾಯಿತೆಂದೂ, ತಾನು ದಿಲ್ಲಿಗೆ ಬರುವವನಿದ್ದುದರಿಂದ ಸಂಬಂಧಿಯಾದ ತಾನು ಕರೆತಂದೆನೆಂದೂ, ಎಪ್ರಿಲಿನಲ್ಲಿ ಹಿಂದಿರುಗುವೆವೆಂದೂ, ಹಿಂದಿರುಗಿದೊಡನೆ ವೀಣೆಯು ಫೇಸಿಗೆ ಕಳುಹಿಸಲ್ಪಡುವಳೆಂದೂ ಮುಂತಾಗಿ ಸುರೇಶ ಬರೆದಿದ್ದನು. ಪತ್ರವನ್ನೋದಿ ಪ್ರಮಥನು ಇವರ ಸ್ವಾಸ್ಥ್ಯವು ಪೂರಾ ಹಾಳಾಗಲೆಂದಂದುಕೊಂಡು ಪತ್ರವನ್ನು ಚೂರು ಚೂರಾಗಿ ಹರಿದು ಹಾಕಿದನು.

ಕೆಲದಿನಗಳು ನಂದುವು. ಎಪ್ರಿಲಿನಲ್ಲಿ ತಿರುಗಿ ಸುರೇಶನ ಪತ್ರವೊಂದು ಪ್ರಮಥನಿಗೆ ಬಂದಿತು. ಇನ್ನೊಂದು ದಿನ ವೀಣೆಯ ಒಂದು ಪತ್ರವೂ ಬಂದಿತು, ಈ ಪತ್ರಗಳಲ್ಲಿ ಯಾವ ವಿಶೇಷ ವಿಚಾರವೂ ಇದ್ದಿಲ್ಲ. ಆದರೆ ಸುರೇಶಬಾಬುವಿನ ಎರಡನೆಯ ಪತ್ರದಲ್ಲಿ ಆತನೂ ವೀಣೆಯೂ ಎಪ್ರಿಲ್ 11ಕ್ಕೆ ದಿಲ್ಲಿಯಿಂದ ಹೊರಟುಬರುವುದಾಗಿ ಬರೆದಿದ್ದನು.

ಪ್ರಮಥನು ಕಲಿಕತ್ತೆಗೆ ಹೊರಟನು. ಬಹಳವಾಗಿ ಇನ್ನೊಮ್ಮೆ ತನ್ನ ಭವಿಷ್ಯವನ್ನು ಪರೀಕ್ಷಿಸಿಬಿಡಬೇಕೆಂದು ಆತನ ನಿರ್ಧಾರವಾಯಿತು. ಮಾವನಾದ ನಗೇಂದ್ರನಲ್ಲಿಗೆ ಪ್ರಮಥನು ಹೋದಾಗ ವೀಣೆಯು ಅದಕ್ಕೆ ಮೊದಲ ದಿನವೇ ದಿಲ್ಲಿಯಿಂದ ಬಂದಿದ್ದಳು. ವೀಣೆಯು ಪ್ರಮಥನನ್ನು ಕಂಡು ಯಾವ ಭಾವವನ್ನೂ ಹೊರಪಡಿಸಲಿಲ್ಲ. ಆದರೆ, ಈ ಬಾರಿ ಹೇಳಿದೊಡನೆಯೇ ವೀಣೆಯು [illegible]

ಮನುಷ್ಯನಾಗಿದ್ದನು. ಇಷ್ಟರಿಂದಬೇ ಆತನು ಸಂತುಷ್ಟನಾಗಿ ವೀಣೆಯನ್ನು ಕರಕೊಂಡು ಒಂದೆರಡು ದಿನಗಳಲ್ಲೇ ಫೇನಿಯನ್ನು ಸೇರಿದನು. ಆದರೇನು?

ವೀಣೆಯು ಪ್ರಮಥನಲ್ಲಿರುವಳೆಂದಿಷ್ಟೇ ಅಲ್ಲದೆ ಆಕೆಯು ಪ್ರಮಥನೊಡನೆ ಸ್ನೇಹಪೂರ್ಣವಾಗಿ ಯಾವ ವ್ಯವಹಾರವನ್ನೂ ಮಾಡುತ್ತಿದ್ದಿಲ್ಲ. ಆದರೂ ಪ್ರಮಥನು ಈ ಬಾರಿ ದುಡುಕದೆ ಬಲು ಸಮಾಧಾನದಿಂದಲೇ ಕೆಲದಿನಗಳನ್ನು ಕಳೆದನೆನಬಹುದು. ಗೃಹಕಾರ್ಯಗಳನ್ನೆಲ್ಲಾ ಮುದುಕಿಯಾದ ತಾಯಿಯು ಮಾಡುತ್ತಿರುವಾಗ ನಾಚುವನಾದರೂ ಪ್ರಮಥನು ವೀಣೆಗೆ ಯಾವುದೊಂದನ್ನೂ ವಿಧಿಸಲು ಸಂಕೋಚಪಡುತ್ತಿದ್ದನು.

ವೀಣೆಯ ದಿನಚರ್ಯೆಯಾದರೋ ಅಲಂಕರಿಸಿಕೊಳ್ಳುವುದು; ಪುಸ್ತಕಗಳನ್ನೋ ವೃತ್ತಪತ್ರಗಳನ್ನೋ ಓದುತ್ತಿರುವುದು ಇಷ್ಟರಲ್ಲಿತ್ತು. ಕಾಫಿ ತಯಾರುಮಾಡುವುದೂ ಅವಳದಾಗಿತ್ತು. ಏಕೆಂದರೆ, ಹಳೇ ಕಾಲದ ಮುದುಕಿಗೆ ಅದನ್ನೊಂದು ತಯಾರುಮಾಡಲು ಚೆನ್ನಾಗಿ ಬರುತ್ತಿದ್ದಿಲ್ಲ. ಇನ್ನೂ ಹೆಚ್ಚೆಂದರೆ ಅಟ್ಟಿಟ್ಟುದನ್ನು ವೀಣೆಯು ಬಡಿಸುತ್ತಿದ್ದಳು. ಇಷ್ಟರಲ್ಲೇ ಕೆಲದಿನಗಳು ಸಂದುವು.

ಆದರೆ, ಇನ್ನೂ ವೀಣೆಯೇನೂ ಪ್ರಮಥನಿಗೆ ಒಲಿಯುವಂತೆ ತೋರಲಿಲ್ಲ. ಪ್ರಮಥನಿಗೆ ತುಂಬಾ ಬೇಸರವೆನಿಸಿತು. ವಿಚಿತ್ರವೆಂದರೆ ಆತನೀ ವರೆಗೂ ಪತ್ನಿಯ ಏಕಾಂತವಾಸವನ್ನನುಭವಿಸಿದ್ದಿಲ್ಲ! ಒಂದು ದಿನ ಪ್ರಮಥನು ಮಹಡಿಯ ಮೇಲೆ ಬಂದಿದ್ದ ವೀಣೆಯೊಡನೆ ಬೇಕೆಂದೇ ತುಂಬಾ ಪ್ರಶ್ನೋತ್ತರಗಳನ್ನು ನಡೆಸಹತ್ತಿದನು. ಆದರೆ ಯಾವುದಕ್ಕೂ ವೀಣೆಯು ಸರಳವಾಗಿ ಉತ್ತರವನ್ನು ಕೊಡಲಾರದವಳಾಗಿದ್ದಳು. ಪ್ರಮಥನು ಆಕೆಯನ್ನು ಅಂದು ಮಹಡಿಯಿಂದ ಕೆಳಗಿಳಿಯಗೊಡಲಿಲ್ಲ. ವೀಣೆಯೂ ಅಂದು ನಿರುಪಾಯಳಾಗಿ ಪ್ರಮಥನ ಆತುರಕ್ಕೆ ಒಳಗಾದಳಾದರೂ ಪ್ರಮಥನಿಗದರಿಂದ ತೃಪ್ತಿಯುಂಟಾಗಲಿಲ್ಲ. ಏನೋ ಅನಿಸಿ ಆತನು ವೀಣೆಯನ್ನು ಅವಳಿಷ್ಟಕ್ಕೆ ಬಿಟ್ಟುಬಿಟ್ಟನು. ವೀಣೆಯೊಡನಂದಿನ ವ್ಯವಹಾರದಿಂದ ಪ್ರಮಥನಿಗೆ ಆಕೆಯ ಚರಿತ್ರೆಯು ಕೆಟ್ಟದೆಯೆಂದೆನಿಸಿತು. ಆದೇ ಮೇ ತಿಂಗಳಲ್ಲಿ ಪ್ರಮಥನು ವೀಣೆಯನ್ನು ಕಲಿಕತ್ತೆಗೆ ಕಳುಹಿಸಿಬಿಟ್ಟನು.

---

## ಆರನೆಯ ಪರಿಚ್ಛೇದ

ಸಂಸಾರದ ಹಂಬಲದಲ್ಲೇ ಪ್ರಮಥನ ಯೌವನದಲ್ಲಿ ಅಥವಾ ಆಯುಷ್ಯದಲ್ಲಿ ಇನ್ನೊಂದು ವರ್ಷವೇ ಸಂದುಹೋಯಿತು. ಈ ಒಂದು ವರ್ಷದಲ್ಲೂ ಏನೂ ಮಹತ್ವದ ಘಟನೆಗಳು ಘಟಿಸಲಿಲ್ಲವೆನಬಹುದು. ವೀಣೆಯೇಕೋ ಕಾಲೇಜನ್ನು ಬಿಟ್ಟು ಪ್ರೈವೇಟಾಗಿಯೇ ಬಿ. ಎ. ಗೆ ಓದಿ ಮುಗಿಸಿದ್ದಳು. ಸುರೇಶಬಾಬುವೇ ಆಕೆಗೆ ಪ್ರೈವೇಟ್ ಅಭ್ಯಾಸಕ್ಕೆ ಅಧ್ಯಾಪಕನಾಗಿ ನಿಂತಿದ್ದನು. ಈ ಪ್ರೈವೇಟ್ ಅಭ್ಯಾಸದ ಖರ್ಚಿಗಾಗಲಿ, ಅಧ್ಯಾಪಕನಿಗೆ ವೇತನವಾಗಲಿ ಯಾವುದನ್ನೂ ಪ್ರಮಥನು ಕಳುಹಿಸಲಿಲ್ಲ. ವೀಣೆಯು ತರಿಸಿಕೊಳ್ಳಲೂ ಇಲ್ಲ ಬಿ. ಎ. ಪರೀಕ್ಷೆಯೇನೋ ಇತು ದಾಯಿತು.

ವೀಣೆಯ ಓದುಗಾರಿಕೆಯು ತೀರಿತೆಂದಾದರೆ ಆಕೆಯು ಮನೆಯಲ್ಲೇ ನಿಲ್ಲಬಹುದೆಂದೂ, ಆಕೆಯು ಹಾಗೆ ಮನೆಯಲ್ಲೇ ನಿತ್ತಲ್ಲಿ ಕ್ರಮೇಣ ಯೋಗ್ಯ ಗೃಹಿಣಿಯರ ದಾರಿಗೆ ಬರಬಹುದೆಂದೂ ಪ್ರಮಥನ ಆಸೆಯಾಗಿತ್ತು. ಆದುದರಿಂದಲೇ ಆತನು ಇದು ತನಕವೂ ಆಕೆಯನ್ನು ಹೆಚ್ಚಾಗಿ ಅವಳಿಷ್ಟದಂತೆಯೇ ಬಿಟ್ಟಿದ್ದನೆನಬಹುದು. ಬಿ. ಎ. ಓದು ತೀರಿದಾಗಲಾದರೂ ಮನೆಯಲ್ಲೇ ಬಂದಿರಬೇಕೆಂದೂ ಪ್ರಮಥನು ಕೇಳಿಕೊಂಡಿದ್ದನು. ಅದಕ್ಕೆ ವೀಣೆಯೂ ಒಪ್ಪಿದ್ದಳು. ಅದರಂತೆ ಬಿ. ಎ. ಪರೀಕ್ಷೆ ಮುಗಿದೊಡೆಯೇ 1932ರ ಬೇಸಿಗೆ ರಜೆಯಲ್ಲಿ ವೀಣೆಯನ್ನು ಪ್ರಮಥನು ಕಲಿಕತ್ತೆಯಿಂದ ಫೇನಿಗೆ ಕರಕೊಂಡು ಬಂದನು. ಸಾಧಾರಣ ಒಂದು ತಿಂಗಳ ವರೆಗೆ ವೀಣೆಯು ಫೇನಿಯಲ್ಲಿ ನಿಂತಿದ್ದಳಾದರೂ ಈ ಬಾರಿಯೂ ಪ್ರಮಥನಿಗೇನೂ ಅನುಕೂಲಳಾಗಿದ್ದಿಲ್ಲ. ಅಷ್ಟರಲ್ಲಿ ವೀಣೆಯು ಕಲಿಕತ್ತೆಗೆ ಹೋಗಬೇಕೆಂದಳು. ಪ್ರಮಥನು ಬೇಡವೆಂದನಾದರೂ ಆಕೆಯು ಕೇಳಲಿಲ್ಲ. ಕೊನೆಗೆ ಆತನು ನಿರುಪಾಯನಾಗಿ ವೀಣೆಯನ್ನು ಕಲಿಕತ್ತೆಗೆ ಕರತಂದ. ನಾಲ್ಕೇ ದಿನವಿದ್ದು ಆಕೆಯನ್ನು ತಿರುಗಿ ಕರೆದುಕೊಂಡುಹೋಗಬೇಕೆಂದು ಪ್ರಮಥನ ಎಣಿಕೆಯಾಗಿತ್ತು.

ವೀಣೆಯು ಕಲಿಕತ್ತೆಗೆ ಬಂದ ಮರುದಿನವೇ ಸುರೇಶಬಾಬುವು ಆಕೆಯನ್ನು ಕರೆಕಳುಹಿದನು. ವೀಣೆಯು ಇಚ್ಛಾನುಸಾರ ಸುರೇಶಬಾಬುವಿನ ಮೋಟಾರುಕಾರಿನಲ್ಲಿ ಬಂಗಾಳ ಕಟ್ಟಡಕ್ಕೆ ಹೋಗಿಬರುತ್ತಿದ್ದಳು.

ಬೇಸಗೆ ರಜೆಯು ತೀರಿತು. ಪ್ರಮಥನಿಗೂ ಕಾಲೇಜನ್ನು ಸೇರಬೇಕಿತ್ತು. ಆತನು ವೀಣೆಯನ್ನು ತನ್ನೊಡನೆ ಹೊರಡುವಂತೆ ಹೇಳಿದ ಆದರೆ, ಆಕೆಯು ಪ್ರಮಥನೊಡನೆ ಹೊರಡಲು ತಿರಸ್ಕರಿಸಿದಳು. ಪ್ರಮಥನು ತುಂಬಾ ಸಂತಾಪಗೊಂಡು ತಾನೊಬ್ಬನೇ ಫೇನಿಗೆ ಹೊರಟುಬಂದ.

ಅದೇ ಜುಲಾಯಿ ತಿಂಗಳಲ್ಲಿ ವೀಣೆಯು ಬಿ. ಎ. ಪಾಸಾದಳು. ಕೂಡಲೇ ಪ್ರಮಥನು ಆಕೆಗೊಂದು ಪತ್ರವನ್ನು ಬರೆದ. ಬಿ. ಎ. ವರೆಗೆ ಓದಿದರೆ ತಕ್ಕಷ್ಟು ವಿದ್ಯೆಯನ್ನು ಪಡೆದಂತಾಯಿತೆಂದೂ, ಇನ್ನಾದರೂ ಫೇನಿಯಲ್ಲೇ ನಿಂತು ಗೃಹಿಣೀಧರ್ಮವನ್ನು ನಡೆಸಬೇಕೆಂದೂ, ಎಂ. ಎ. ಗೆ ಸೇರುವ ಅವಶ್ಯಕವಿಲ್ಲೆಂದೂ ಪತ್ರವನ್ನು ಬರೆದನು. ಆದರೆ, ವೀಣೆಯು ಇದಾವುದನ್ನೂ ಗಮನಿಸದೆ ಅದೇ ಅಗಸ್ಟ್ ತಿಂಗಳಲ್ಲಿ ಎಂ. ಎ. ಕ್ಲಾಸಿಗೆ ಸೇರಿದ್ದಳು.

ವೀಣೆಯು ಎಂ. ಎ. ಕ್ಲಾಸಿಗೆ ಸೇರಿ ಎರಡು ತಿಂಗಳುಗಳು ಸಂದಿದ್ದುವು. ಅದೇ ಪೂಜಾಸಮಯ(ನವರಾತ್ರಿ)ದ ರಜೆಯಲ್ಲಿ ವೀಣೆಯು ಆಕಸ್ಮಿಕವಾಗಿ ಫೇನಿಗೆ ಬಂದಳು. ಇದುವರೆಗೂ ವೀಣೆಯು ತಾನಾಗಿಯೇ ಫೇನಿಗೆ ಬಂದುದಿಲ್ಲ. ಪ್ರಮಥನಿಗೆ ಆಕೆಯನ್ನು ಕಂಡು ಸಂತೋಷವಾಯಿತು. ಏನೋ ಸ್ವಲ್ಪ ಬುದ್ಧಿಯು ಸುಧಾರಿಸಿರಬೇಕೆಂದು ಪ್ರಮಥ ನೆಣಿಸಿದನು.

ವೀಣೆಯ ಚರಿತ್ರೆಯ ಕುರಿತು ಪ್ರಮಥನು ಮೊದಲಿನಿಂದಲೂ ಸಂದೇಹಪಡುತ್ತಲೇ ಇದ್ದನು. ಅಥವಾ ಪ್ರಮಥನೇ ಏನು? ಆಕೆಯ ಈ ರೀತಿಯ ನಡತೆಗಳನ್ನು ಬಲ್ಲ ಯಾವನಾದರೂ ಆಕೆಯು ಶೀಲವತಿಯಾಗಿರಬಹುದೆಂದು ನಂಬುವಂತಿದ್ದಿಲ್ಲ. ಪ್ರಮಥನಾದರೂ

ಒಳಗಿಂದೊಳಗೇ ಕೊರಗುತ್ತಿದ್ದನಲ್ಲದೆ ಬಾಯಿ ಬಿಟ್ಟವನಲ್ಲ. ಆ ಕುರಿತು ವೀಣೆಯೊಡನೆ ಯಾವ ಮಾತನ್ನೂ ಇದುವರೆಗೆ ಆಡಿದವನೂ ಅಲ್ಲ. ಪ್ರತ್ಯಕ್ಷವಾಗಿ ತೋರಿಸಲಾರದ ಯಾವ ಸಂಗತಿಯನ್ನೂ ತಿಳಿದಿದ್ದರೂ ಅಡಗಿಸುತ್ತಿರುವುದು ಲೋಕದ ಸ್ವಭಾವವಾಗಿದೆ. ಅಂತೇ ಪ್ರಮಥನು ವೀಣೆಯ ಯಾವ ಸಂಗತಿಯನ್ನೂ ಅರಿಯದವನಂತೆಯೇ ಸಂಭಾವಿತನಾಗಿ ವ್ಯವಹರಿಸುತ್ತಿದ್ದನೆನಬಹುದು.

ಪ್ರಮಥನಿಗೆ ಸಂತೋಷವಾಯಿತೋ ವಿಷಾದವಾಯಿತೊ ನಮಗರಿಯದು. ವೀಣೆಯು ಈ ಬಾರಿ ಬಂದಾಗ ಸೂಕ್ಷ್ಮವಾದ ಗರ್ಭಚಿಹ್ನೆಯುಳ್ಳವಳಾಗಿರುವಳೆಂದು ಅವನು ನಂಬಿದನು. ಆತನ ಆತ್ಮಸಾಕ್ಷಿಯನ್ನಾರು ಬಲ್ಲರು? ಆತನ ಹೃದಯವು ಮಾತ್ರ ಕುದಿಯುತ್ತಿತ್ತೆಂದು ನಾವು ಬಲ್ಲೆವು.

---

## ಏಳನೆಯ ಪರಿಚ್ಛೇದ

ನಮ್ಮ ವಾಚಕರಿಗೆ ಒಂದು ಸೂಚನೆಯನ್ನು ಕೊಡಬೇಕೆಂದಿರುವೆವು. ನಿಮ್ಮಲ್ಲಿ ಹಲವರು ಈ ಕಥೆಯಲ್ಲೇನೂ ಚಮತ್ಕಾರದ ಘಟನೆಗಳಿಲ್ಲವಾದುದರಿಂದ ಬೇಸರಗೊಂಡಿರಲೂ ಬಹುದು. ಆದರೆ, ನಾವು ಮುನ್ನುಡಿಯಲ್ಲಿ ವಿಜ್ಞಾಪಿಸಿಕೊಂಡಂತೆ ಚಮತ್ಕಾರದ ಘಟನೆಗಳನ್ನು ಕಲ್ಪಿಸಿ ಕಥೆಯನ್ನು ಬರೆಯುತ್ತಿರದೆ, ಆವುದೋ ಒಂದು ಸಂಸಾರದ ನಿಜವಾದ ವೃತ್ತಾಂತವನ್ನು ಸಂಗ್ರಹಿಸುತ್ತಿರುವೆವೆಂಬುದನ್ನು ನೆನಸಿಕೊಳ್ಳಬೇಕಾಗಿದೆ. ಒಂದು ದಾಂಪತ್ಯದ ಛಿದ್ರವನ್ನು ತಾವು ಓದುತ್ತಿರುವಿರಷ್ಟೆ. ಅದನ್ನು ನಾವು ಸಂಗ್ರಹಿಸಲು ಕಾರಣವಿದೆ.

ಹಿಂದೂ ಸ್ತ್ರೀಯು ಕನ್ಯಾವಸ್ಥೆಯಲ್ಲೇ ಹಿರಿಯ ಸ್ತ್ರೀಯರ ಸಹವಾಸ, ಶಿಕ್ಷಣಗಳಿಗೆ ಹೊಂದಿಕೊಂಡಿದ್ದಲ್ಲಿ, ಮುಂದಿನ ಜೀವನದಲ್ಲಿ ಯೋಗ್ಯ ಗೃಹಿಣಿಯಾಗಿ ಬಾಳುವಳು. ಸ್ತ್ರೀಯರ ಮೇಲ್ಮೆಗೆ ಶೀಲವೇ ಕಾರಣವಲ್ಲದೆ ವಿದ್ಯೆಯಲ್ಲ. ವಿದ್ಯೆಯೂ ಕಾರಣವಾಗಬಹುದಾದರೂ ಅದು ಈಗಿನ ಕಾಲೇಜುಗಳಲ್ಲಿ ದೊರೆಯುವ ಬಿ. ಎ., ಎಂ. ಎ. ಡಿಗ್ರಿಗಳಲ್ಲ. ಕರಾಳ ಸರ್ಪಿಣಿಯನ್ನು ಹೆಡೆಯಲ್ಲಿನ ಮಣಿಯಿಂದಾಗಿ ಯಾರೂ ಒಳಗೆ ಸೇರಿಸಿಕೊಳ್ಳುವಂತಿಲ್ಲ. ಶೀಲ ಗುಣಸಂಪನ್ನೆಯರಾದ ನಾರಿಯರು ಗೃಹದೀಪಗಳಂತೆ, ಗೃಹಲಕ್ಷ್ಮಿಯರೆನಿಸಿ, ಉಭಯ ಕುಲಗಳ ತಾರಕಿಯರಾಗುವರೆಂದೂ ಅಂತಹರೇ ಪೂಜಾರ್ಹರೆಂದೂ ಮನು-ಪರಾಶರರೇ ಮೊದಲಾದವರು ಹೇಳಿದ್ದಲ್ಲದೆ, ಕುಲಟೆಯರಿಗೆಲ್ಲಾ ಸ್ವಾತಂತ್ರ್ಯಗೊಟ್ಟು ಮೆರೆಯಿಸಬೇಕೆಂದು ಯಾರೂ ಹೇಳಿಲ್ಲ.

ಸ್ತ್ರೀಯೊಬ್ಬಳು ಸಂಸಾರದಲ್ಲಿ ಪತಿವ್ರತೆಯಾಗಿಯೂ ಹಿರಿಯರಿಗೆ ವಿಧೇಯಳಾಗಿಯೂ ಇದ್ದಲ್ಲಿ ಆವಳಿಗಾಗಲೀ ಅವಳ ಸಂಸಾರಾನುಬಂಧಿಗಳಿಗಾಗಲಿ ಆಗುವ ಸಂತೋಷಕ್ಕೆ ಪಾರವೇ ಇಲ್ಲ. ಒಂದೇ ಮಾತಿನಲ್ಲ ಹೇಳುವುದಾದರೆ ಯಾವುದೇ ಒಂದು ಸಂಸಾರದಲ್ಲಿ ಸುಖ-ಸಂತೋಷಗಳೂ ಇಲ್ಲವೇ ದುಃಖ ಸಂತಾಪಗಳೂ ಕರೆತರುವ ಹೆಣ್ಣಿನ ಯೋಗ್ಯತೆಯನ್ನೇ ಹೊಂದಿಕೊಂಡಿರುವವಹುದು

ಇನ್ನೊಂದು ಸಾರಾಂಶದ ಮಾತೆಂದರೆ ಇಂದಿನ ಕಾಲೇಜುಗಳಲ್ಲಿನ ಸ್ತ್ರೀಶಿಕ್ಷಣವು ಪುರುಷ ನಿರುದ್ಯೋಗಿಗಳೊಡನೆ ಸ್ತ್ರೀನಿರುದ್ಯೋಗಿಗಳನ್ನೂ ಬೆಳೆಸತಕ್ಕುದೂ, ಸ್ತ್ರೀಯರನ್ನು ವಿಲಾಸಿನಿಯರನ್ನಾಗಿ ಮಾಡತಕ್ಕುದೂ ಆಗಿರುವುದಲ್ಲದೆ ಹಿಂದೂ ಸಂಸಾರವನ್ನು ನಡೆಯಿಸಿ ಕೊಂಡು ಹೋಗಬಲ್ಲ ಗೃಹಣಿಯರನ್ನು ನಿರ್ಮಿಸತಕ್ಕುದಲ್ಲ ಯೋಗ್ಯ ಗೃಹಣಿಯರು ಹೆಚ್ಚದೆ ಹಿಂದೂಸಮಾಜದ ಏಳಿಗೆಯಿಲ್ಲ ಆದರಲ್ಲಿ ಸುಖಶಾಂತಿಗಳಿಲ್ಲ. ಎಷ್ಟೊಂದು ಸುಂದರವಿದ್ಯಾವಂತ ಪ್ರಾಯಸ್ಥ ಹೆಣ್ಣುಗಳು ಸಮಾಜದಲ್ಲಿ ಹೆಚ್ಚಿದರೂ ನವನಾಗರಿಕ ಯುವಕರು ಅಂತಹರನ್ನೆ ಬಯಸಿದರೂ ಹೆಣ್ಣುಗಳಲ್ಲಿ ಪಾತಿವ್ರತ್ಯ ಮತ್ತು ವಿಧೇಯತೆಗಳಿಲ್ಲದಿದ್ದಲ್ಲಿ ಅಂತಹ ದಾಂಪ ತ್ಯವು ನಿತ್ಯಸಂತಾಪವನ್ನನುಭವಿಸುತ್ತಿರಬೇಕಾಗುವುದು. ನಮ್ಮ ಕಥಾನಾಯಕ ಪ್ರೊಫೆ ಸರ್ ಪ್ರಮಥನಾಥ ಸರಕಾರನೇ ಈ ಸಮಸ್ಯೆಗೆ ಉದಾಹರಣೆಗಾಗಿರುವನು. ವಾಚಕರು ಈ ನೀತಿಯನ್ನು ಮನಗಾಣಲಿಕ್ಕಾಗಿಯೇ ನಾವು ಅವನ ನಿಜವೃತ್ತಾಂತವನ್ನಷ್ಟೆ ಸಂಗ್ರಹಿಸ ಹೊರಟಿರುವೆವೆಂದು ತಿಳಿಯಬೇಕು.

ಈ ಕಥೆಯಲ್ಲಿ ಮುಂದೆ ನ್ಯಾಯಸ್ಥಾನದ ವಿಚಾರಣೆಗಳು ಬರಲಿವೆ. ಅದರಲ್ಲಿ ಹಲವು ಮಂದಿ ಈ ವೃತ್ತಾಂತಕ್ಕೆ ಸಂಬಂಧಿಸಿದ್ದು, ಅವರು ತಮ್ಮ ತಮ್ಮ ಹೇಳಿಕೆಯನ್ನು ಸರ್ವಶ್ರುತ ಗೊಳಿಸಿರುವರು. ಇದರ ಆಧಾರದಿಂದ ಈ ವೃತ್ತಾಂತವು ಸಂಗ್ರಹಿಸಲಾಗುತ್ತಿದೆ. ಪ್ರಮ ಥನ ಹೇಳಿಕೆಯಂತೆ ನಡೆದೊಂದು ಸಂಗತಿಯನ್ನು ತಿಳುಹಿಸಿ ಈ ಪರಿಚ್ಛೇದವನ್ನು ಕೊನೆಗೊ ಳಿಸುವೆವು.

ವೀಣೆಯ ಗರ್ಭಚಿಹ್ನೆಯು ಪ್ರಮಥನ ಹೃದಯವನ್ನು ಕೊರಗಿಸುತ್ತಿತ್ತೆಂದು ಹಿಂದೆ ಯೇ ಹೇಳಿರುವೆವಷ್ಟೆ. ಆ ಕುರಿತು ಆತನು ಏನೇನು ಭಾವನೆಗಳನ್ನು ಹೊಂದಿದ್ದನೋ ಏನೇನು ರಹಸ್ಯಗಳನ್ನು ಗೊತ್ತಿಗೆ ಹಚ್ಚಿದ್ದನೋ ನಮಗರಿಯದು. ಅಂತೂ ಕೆಲಸಮಯ ದಿಂದ ಆತನು ವೀಣೆಯ ಪ್ರತ್ಯಕ್ಷ ಪರೋಕ್ಷಗಳ ಪ್ರತಿಯೊಂದು ಸಂಗತಿಗಳನ್ನೂ ಸೂಕ್ಷ್ಮ ವಾಗಿ ತಿಳುಕೊಳ್ಳಲು ಯತ್ನಿಸುತ್ತಿದ್ದನು.

ವೀಣೆಯು ಫೇನಿಗೆ ಬಂದು ಕೆಲವೇ ದಿನಗಳಾಗಿದ್ದುವು. ಒಂದು ದಿನ ಸಂಜೆಹೊತ್ತಿಗೆ ವೀಣಾ--ಪ್ರಮಥರು ಭೇಟಿಯಾದಾಗ ಪ್ರಮಥನು ವ್ಯಂಗವಾಗಿ 'ವೀಣಾ! ಹೊಣೆಗಾರಿಕೆ ಯನ್ನು ಹೊರಲು ಸಮರ್ಥಳಾದೆ ತಾನೆ.' ಎಂದೆಂದು ತೀಕ್ಷ್ಣವಾದ ಕಟಾಕ್ಷವನ್ನು ಬೀರಿ ದನು. ವೀಣೆಗೆ ಈ ಮಾತಿನ ಅರ್ಥವಾಗದಿರಲಿಲ್ಲ. ವಾಚಕರೂ ಮರೆತಿರಲಿಕ್ಕಿಲ್ಲ. ಪ್ರಥಮ ಸ ಮಾಗಮಕ್ಕಾಗಿ ಕಾತರನಾಗಿದ್ದರೂ ಪ್ರಮಥನು ಈ ಕಾರಣದಿಂದಲೇ ನಿಗ್ರಹಿಸಿಕೊಂಡಿದ್ದನು.

ವೀಣೆಯ ಅಂತರಂಗವು ಶುದ್ಧವಾಗಿರಲಿಲ್ಲ. ಆಕೆಯ ಹೃದಯವು ಪದೇ ಪದೇ ಶಂಕಿ ಸುತ್ತಿತ್ತು. ಪ್ರಮಥನ ಈ ಮಾತಿನಿಂದ ಒಮ್ಮೆ ಅಧೀರಳಾದಳಾದರೂ ವೀಣೆಯು ಗಡುಸು ಹೆಣ್ಣಾದುದರಿಂದ ಧೈರ್ಯಗೆಡದೆ ಪ್ರಮಥನ ಮಾತಿಗೆ 'ಹಾಗೆಂದರೇನು?' ಎಂದಳು.

**ಪ್ರಮಥ:**—ಅಲ್ಲ, ಎಂ. ಎ. ತೀರದೇನೇ ಹೊರಟುಬಿಟ್ಟೆ. ಬಡಾಕಾಕಾರವರ ಪ್ರೈವೇಟ್ ಟ್ಯೂಶನ್ನು ಇಷ್ಟು ಬೇಗನೇ ಫಲಿಸಿತೇನೋ.

**ಪ್ರಮಥ:**—ಅದೇನು ಸ್ತ್ರೀಯರಿಗೆ ಕಾರ್ಯಸ್ವಾತಂತ್ರ್ಯವಿರುವಾಗ ಪುರುಷರಿಗೆ ವಾಕ್‌ಸ್ವಾತಂತ್ರ್ಯವೂ ಇರಬಾರದೆ?

**ವೀಣೆ:**—ನೀವು ನನ್ನಲ್ಲಾವ ತಪ್ಪನ್ನು ಕಂಡು ಹೀಗೆ ಮಾತಿನಿಂದ ಇರಿಯುವಿರಿ?

**ಪ್ರಮಥ:**—ವೀಣಾ! ಬಾಯಿಬಿಟ್ಟು ಕೆಡಬಾರದು. ನನ್ನನ್ನು ಕೆದರಿಸಬೇಡ. ನಿನ್ನ ಪಾಡಿಗೆ ನೀನಿದ್ದಂತೆಯೇ ಇದ್ದು ಬಿಡು. ನನಗೆ ನಿನ್ನ ಆವಶ್ಯಕತೆಯೇನೂ ಇಲ್ಲ ತಿಳಿಯಿತೇ?

**ವೀಣೆ:**—ಇದೇನಿಷ್ಟು ವಿಪರೀತ! ಯಾವ ತಪ್ಪಿಗಾಗಿ?

**ಪ್ರಮಥ:**—ಒಂದೆರಡಲ್ಲ, ಹಲವಿವೆ. ನಾನೇ ಅಲ್ಲ ಹತ್ತು ಮಂದಿಗೆ ಖಚಿತಪಡಿಸುವಷ್ಟು ಆಧಾರಗಳು ನನ್ನಲ್ಲಿವೆ, ಈಗೇನನ್ನುವೆ?

ವಿಚಾರವಮಾಡಿದರೆ ಸತಿಯರಿಗೆ ಹೇಳಿಸದ ಹೆಚ್ಚುಗಾರಿಕೆಗಳು ವೀಣೆಯಲ್ಲಿ ಹಲವಿದ್ದುವು. ಅವೆಲ್ಲಾ ನವೀನ ವಿದ್ಯಾಭ್ಯಾಸದ ಸ್ವಾತಂತ್ರ್ಯದ, ಸ್ವೇಚ್ಛಾವಿಹಾರದ, ಅಹಂಕಾರದ ಆವೇಗಗಳಿಂದ ಒಂದೊಂದಾಗಿ ಘಟಿಸಿಹೋದುವು. ಪಾತಿವ್ರತ್ಯ ವಿಧೇಯತೆಗಳ ಗಂಧವನ್ನೂ ಆಕೆಯು ಅರಿಯಳಾದುದರಿಂದ ಸ್ವಂತ ಅಜ್ಞಾನದಿಂದಲೂ ಪರರ ಪ್ರೇರಣಾ ಬಲಾತ್ಕಾರಗಳಿಂದಲೂ ತಪ್ಪುಗಳು ತಪ್ಪೆಂದೂ ಅರಿತುಕೊಳ್ಳಲು ಅವಕಾಶವಿಲ್ಲದ ರೀತಿಯಲ್ಲಿ ಘಟಿಸಿಹೋಗಿದ್ದವು. ಆದರೆ ಈಗೀಗ ಅದರ ತುಸುಮಾತ್ರ ಅರಿವು ವೀಣೆಗೆ ಆಗಹತ್ತಿತು. ಪ್ರಮಥನ ಈ ಬೆದರಿಕೆಯಿಂದ ಆಕೆಯು ತನ್ನ ವಿದ್ಯೆಯ ಹಾಗೂ ಸ್ಥಾನಮಾನಗಳ ಗೌರವಕ್ಕೆಲ್ಲಿ ಹಾನಿಯು ತಟ್ಟುವುದೋ ಎಂದುತಳಮಳಿಸ ಹತ್ತಿದಳು. ತನ್ನ ಪ್ರಕಾಶವಾದ ಅಪರಾಧಗಳನ್ನು ಬೇಕಿದ್ದರೆ ಚೆನ್ನಾಗಿಯೇ ಅರಿತುಕೊಳ್ಳಬಲ್ಲವನಾಗಿದ್ದನೆಂದೂ ಆಕೆಗೆ ಗೊತ್ತಿತ್ತು.

'ಈಗೇನನ್ನುವೆ?' ಎಂದಾಗ ವೀಣೆಯ ಕಣ್ಣುಗಳಲ್ಲಿ ಕಂಬನಿಯೂರಿತು. ಆಕೆಯು ತನ್ನ ಅಪರಾಧಗಳನ್ನೆಲ್ಲಾ ಹೇಳಿ, 'ನಾಥ! ನನ್ನಿಂದ ಅಪರಾಧವಾಗಿವೆ. ಒಮ್ಮೆಗೆ ಕ್ಷಮಿಸಬೇಕು. ನನ್ನನ್ನು ಬಹಿರಂಗಗೊಳಿಸಬಾರದು. ಮುಂದಕ್ಕೆ ಎಚ್ಚರದಿಂದಿರುವೆನೆಂ'ದು ಅತಿ ವಿನಯದಿಂದ ಬೇಡಿಕೊಂಡಳು.



# ಎಂಟನೆಯ ಪರಿಚ್ಛೇದ

ವೀಣೆಯಿಂದು ಮಗುವಿನ ತಾಯಾಗಿದ್ದಳು. ಆದರೂ ಮಗುವಿನ ಪೋಷಣಭಾರವೇನೂ ಅವಳಿಗಿದ್ದಿಲ್ಲ. ಮಗುವು ಚಿತ್ತರಂಜನ ಸೇವಾಸದನದಲ್ಲಿ ಬೆಳೆಯುತ್ತಿದೆ. ವೀಣೆಯು ನಿರಾತಂಕವಾಗಿ ನಾನಾ ವಿನೋದವಿಹಾರಗಳಿಂದ ಸುಖವಾಗಿ ತಂದೆಯ ಮನೆಯಲ್ಲಿದ್ದಾಳೆ. ಆದರೆ ಪ್ರಮಥನೇಕೆ ಇನ್ನೂ ಆಶೆಯನ್ನು ಬಿಡಲೊಲ್ಲನೋ ನಮಗರಿಯದು.

ವೀಣೆಯು ಗರ್ಭಿಣಿಯೆಂದು ತಿಳಿದು ನಗೇಂದ್ರನು 22ನೇ ಇಸವಿಯ ಎಪ್ರಿಲಿನಲ್ಲಿ ಆಕೆಯನ್ನು ಫೇನಿಯಿಂದ ಕಲಿಕತ್ತೆಗೆ ಕರತಂದ. ಆದೇ ಆಗಸ್ಟ್ ೧೩ರಲ್ಲು ವೀಣೆಯು ಚಿತ್ತರಂಜನ ಸೇವಾಸದನದಲ್ಲಿ ಗಂಡು ಮಗುವನ್ನು ಹೆತ್ತಳು. ಮಗು ಬಾಣಂತಿಯರು ಸುಖಮುಖವಾಗುವಾಗ ಮರ್ಯಾದೆಯಂತೆ ಕರೆತರಲು ಆದೇ ನವರಾತ್ರಿಯಲ್ಲಿ ಪ್ರಮಥನು ಕಲಿಕತ್ತೆಗೆ ಹೋದ. ಆದರೆ ವೀಣೆಯು ಫೇನಿಗೆ ಬರಲು ತಿರಸ್ಕರಿಸಿದಳು. ಬೇಸರದಿಂದ ಹಿಂತಿರುಗಿ ಬಂದ ಪ್ರಮಥನು ಏಳೆಂಟು ತಿಂಗಳುಗಳ ವರೆಗೂ ತಿರುಗಿ ಕರೆಯಹೋಗಲಿಲ್ಲ.

ಇಂದೀಗ ೀಳನೆಯ ಜೇಸಿಗೆಯ ರಜೆಯಲ್ಲಿ ಪ್ರಮಥನು ಕಲಿಕತ್ತೆಗೆ ಬಂದಿದ್ದಾನೆ. ಆದರೆ ಈ ಬಾರಿ ಪ್ರಮಥನು ತುಸು ಕಠಿಣನಾಗಿ ಕಂಡು ಬಂದನು. ಒಂದು ದಿನ ಯಾವ ವೀಣೆಯು ಪ್ರಮಥನೊಡನೆ ಸರ್ವಾಪರಾಧಗಳನ್ನೂ ಕ್ಷಮಿಸಬೇಕೆಂದು ಬೇಡಿದ್ದಳೋ, ಯಾರ ತಕ್ಷಮ್ಯ ಅಪರಾಧಗಳನ್ನೂ ಪ್ರಮಥನು ಕ್ಷಮಿಸಬೇಕೆಂದು ನೆನಸಿದ್ದನೋ ಆ ವೀಣೆಯು ಇಂದು ಪುನಃ ಮೊದಲಿನಿಂದಲೂ ವಿಶೇಷವಾದ ತಿರಸ್ಕಾರ ದೃಷ್ಟಿಯಿಂದವನನ್ನು ಕಾಣುತ್ತಿರುವಳೆಂದರೆ, ಪ್ರಮಥನ ಮನಸ್ಸು ಇನ್ನೂ ಮೃದುವಾಗಿಯೇ ಉಳಿಯಲು ಸಾಧ್ಯವೇ? ಪ್ರಮಥನು ಬೇಕೆಂದೇ ವೀಣೆಯನ್ನು ಕೆದರುವ ಸಲುವಾಗಿ ಒಮ್ಮೆ ಆಕೆಯ ಡೈರಿಯನ್ನು ತೆಗೆದುಕೊಂಡು ಓದಹತ್ತಿದನು. ಆಗ ವೀಣೆಯು ಬಂದು ಇದನ್ನು ಕಂಡು ರೇಗಿದಳು. ಕೂಡಲೇ ತನ್ನ ಕೊಠಡಿಯಿಂದ ಹೊರ ಹೋಗಬೇಕೆಂದು ಪ್ರಮಥನಿಗೆ ಅಬ್ಬರಿಸಿ ಹೇಳಿದ್ದಳು.

ವೀಣೆಯು ಪ್ರಮಥನ ಕೈಯಿಂದ ತನ್ನ ಡೈರಿಯನ್ನೆಳೆಕೊಂಡಳು. ಪ್ರಮಥನು ಕ್ಷಣ ಹೊತ್ತು ಅಲ್ಲೇ ಸ್ತಬ್ಧನಾಗಿ ಕುಳಿತಿದ್ದು ಕೂಡಲೇ ಎದ್ದು ಹೊರಟ. ವೀಣೆಯ ಕುರಿತು ಆತನ ಹೃದಯವು ತಿರಸ್ಕಾರದ ಮೂರ್ತಿಯಂತಾಗಿತ್ತು. ಉದ್ವಿಗ್ನತೆಯಿಂದಾತನು ಒಂದು ರೀತಿಯಾಗಿ ಕಾಣುತ್ತಿದ್ದನು. ಆತನ ಮುಖದಿಂದ ಬಿಸಿಯುಸಿರು ಹೊರಹೊಮ್ಮುತ್ತಿದ್ದಿತು.

ಅಂದು ಜೂನ್ ೧೭ನೆಯ ರವಿವಾರವಾಗಿತ್ತು. ಪ್ರಮಥನು ಹೊರ ಹೊರಟವನು ಸೀದಾ ವೀಣೆಯ ತಂಗಿಯ ಗಂಡನ ಮನೆಗೆ ನಡೆದನು. ಸಿಟಿಯ ಇನ್ನೊಂದು ಕಡೆಗೆ ವೀಣೆಯ ತಂಗಿಯನ್ನು ಮದುವೆಮಾಡಲಾಗಿತ್ತು. ಮನೆಯಲ್ಲಿ ಆ ಗೃಹಸ್ಥನಿದ್ದನೋ ಇಲ್ಲವೋ ನಮಗರಿಯದು. ಆದರೆ ಅಲ್ಲಿ ಪ್ರಮಥನ ಭಾವನಂಟ (ವೀಣೆಯ ಅಣ್ಣ)ನಾದ ವಿನೋದ ವಿಹಾರಿಯು ಭೆಟ್ಟಿಯಾದ. ವೀಣೆಯ ವರ್ತನಗಳು ಅವನ ಅನುಬಂಧಿಗಳಿಗೂ ಕೆಲವರಿಗೆ ಬೇಸರವನ್ನುಂಟುಮಾಡಿದ್ದವು. ಆಕೆಯ ಅಣ್ಣನು ಸದ್ಯಕ್ಕೆ ಪ್ರಥಮನೊಡನೆ ತನ್ನ ಸಂತಾಪವನ್ನು ವ್ಯಕ್ತಪಡಿಸಿದ. ಭಾವ-ನಂಟರೊಳಗೆ ಬಹಳ ಹೊತ್ತು ಮಾತು-ಕಥೆಗಳು ನಡೆದವು. ವಿಚಾರದಲ್ಲಿ, ವೀಣೆಯು ಈಗಲೂ ದಿನಾಲೂ ಬಂಗಾಳ ಕಟ್ಟಡಕ್ಕೆ ಹೋಗಿ ಬರುತ್ತಿರುವಳೆಂದು ಪ್ರಮಥ

ಪ್ರಮಥನೂ ವಿನೋದವಿಹಾರಿಯೂ ಏನೋ ಮಾತಾಡಿಕೊಂಡು ಹೊರಟರು. ವಿನೋದನು ಪ್ರಮಥನೊಡನೆ ಸುರೇಶನ ಪರಿಚಯಮಾಡಿಕೊಡಬೇಕೆಂದ. ಸುರೇಶನು ಬಂಗಾಳ ವಿಮಾಕಂಪೆನಿಯ ಒಬ್ಬ ಮುಖ್ಯ ಕಾರ್ಯಕರ್ತನೂ ಆಗಿದ್ದನೆಂದು ಹಿಂದೆ ಹೇಳಿ ರುವೆವಷ್ಟೆ. ವಿನೋದವಿಹಾರಿಯೂ ಆ ಕಂಪೆನಿಯ ನಡಿಯಾ ಜಿಲ್ಲೆಯ ಏಜನ್ಸಿಯನ್ನು ಪಡಕೊಳ್ಳಬೇಕೆಂದಿದ್ದ. ಅದನ್ನು ಕೊಡಿಸಿಕೊಡಲು ಪ್ರಮಥನೀಗ ಮಧ್ಯಸ್ಥನಾಗಬೇಕೆಂದ.

ಪ್ರಮಥನ ಮನೆಯನ್ನೇ ಏಕೆ ಜೀವಿತವನ್ನೇ ಸುರೇಶನು ಉತಾಯಿಸಿದ್ದನು. ಅದಕ್ಕಾಗಿ ಪ್ರಮಥನ ಹೃದಯಜ್ವಾಲೆಯು ಸುರೇಶನ ಕಡೆಗೆ ಹರಿಬಿದ್ದಿತು. ಆದರೆ ಪ್ರಮಥನು ಒಂದನ್ನೂ ಅರಿಯದವನಂತೆಯೇ ಸುರೇಶನೊಡನೆ ತನ್ನ ಲೌಕಿಕ ವ್ಯವಹಾರವನ್ನು ಇದು ವರೆಗೂ ಕೆಡಿಸಿಕೊಂಡಿರಲಿಲ್ಲ. ನಾವು ಒಳ್ಳೆಯವರಾಗಿದ್ದಲ್ಲಿ ಊರೇ ಒಳ್ಳೆಯದಾಗಿರುತ್ತಿತ್ತು ಎಂದು ಪ್ರಮಥನು ತನ್ನ ಮನಸ್ತಾಪವನ್ನು ನುಂಗಿಕೊಂಡಿದ್ದನು.

ಹಗಲು ಎರಡೂವರೆ ಘಂಟೆಯಾಗಿತ್ತು. ಪ್ರಮಥನೂ ವಿನೋದನೂ ಬಂಗಾಳ ಕಟ್ಟ ಡದ ಕಡೆಗೆ ನಡೆದರು. ಸುರೇಶನು ಅಲ್ಲೇ ಇರುವನೆಂದು ತಿಳಿಯಿತು. ಕಟ್ಟಡದ ಒಂದು ಪಕ್ಕಕ್ಕೆ ಹೋಗಿ ಇಬ್ಬರೂ ತುಸುಹೊತ್ತು ಏನನ್ನೋ ನಿರೀಕ್ಷಿಸತೊಡಗಿದರು.

ಅಷ್ಟರಲ್ಲೇ ಅಲ್ಲಿಗೊಂದು ಕಾರು ಬಂದಿತು. ಅದು ಸುರೇಶನ ಕಾರೆಂದು ಪ್ರಮಥನಿಗೆ ತಿಳಿಯಿತು. ಇಬ್ಬರೂ ರೆಪ್ಪೆ ಬಡಿಯದೆ ಏನನ್ನೋ ನೋಡುತ್ತಿದ್ದರು. ಒಂದು ಕಾಲು ಘಂಟೆ ಯ ಮೇಲೆ ಪ್ರಮಥನು ವಿನೋದನೊಡನೆ ಮಹಡಿಯ ಮೆಟ್ಟಲುಗಳನ್ನು ಹತ್ತತೊಡಗಿದನು. ಹತ್ತಿ ಇಬ್ಬರೂ ಸುರೇಶನ ವಾಸ್ತವ್ಯವಿರುವ ಭಾಗದ ವರೆಗೂ ನಡೆದರು.

ಸುರೇಶನ ಶಯನಗೃಹದ ಬಾಗಿಲು ಇಕ್ಕಿತ್ತು. ಒಬ್ಬ ನೌಕರನು ಬಂದು ಅಲ್ಲೇ ನಿರೀ ಕ್ಷಣ ಶಾಲೆ (Waiting Room) ಯಲ್ಲಿ ನಿಲ್ಲಹೇಳಿ ಹೋದನು. ಆ ನೌಕರನು ಮೊದಲಿ ನಿಂದಲೂ ಪ್ರಮಥನನ್ನು ಬಲ್ಲವನಾಗಿದ್ದನು.

ಪ್ರಮಥನಿಗೆ ಸಹಿಸಲಿಲ್ಲ. ವಿನೋದವಿಹಾರಿಯೂ ಆತುರಗೊಂಡಿದ್ದನು. ಇಬ್ಬರೂ ಮೆಲ್ಲಗೆ ಏನನ್ನೋ ಮಾತನಾಡಿಕೊಂಡು ಹೊರಟರು. ಶಯನಗೃಹದ ಬಾಗಿಲನ್ನು ತಳ್ಳಿ ಬಿಟ್ಟು ತೆರೆದರು. ಒಳಗಿನವರಿಗೆ ಮಿಂಚು ಬಡಿದಂತಾಯಿತು.

ಮುಂದೆ ನೋಡಿ ಪ್ರಮಥನೂ ವಿನೋದನೂ ಮೊದಲು ಲಜ್ಜೆಯಿಂದ ಮುದುಡಿದಂತಾ ದರೂ ಉತ್ತರ ಕ್ಷಣದಲ್ಲೇ ಇಬ್ಬರೂ ಕೋಪ-ಸಂತಾಪಗಳಿಂದ ಉರಿಯಹತ್ತಿದರು. ಒಂದೇ ನಿಮಿಷ ಅಲ್ಲಿದ್ದು ಇಬ್ಬರೂ ಹೊರಹೊರಟುಬಿಟ್ಟರು.

ಅಲ್ಲಿಪರೇನನ್ನು ಕಂಡರೆಂಬುದನ್ನು ಮುಂದಕ್ಕೆ ವಿನೋದವಿಹಾರಿಯು ತನ್ನ ಸಾಕ್ಷ್ಯ ದಲ್ಲಿ ಹೇಳಲಿರುವನು.

---

## ಒಂಬತ್ತನೆಯ ಪರಿಚ್ಛೇದ

ಒಂದು ದಿನ ಪ್ರಮಥನಾಥನು ತನ್ನ ಕೋಣೆಯಲ್ಲಿ ಏನನ್ನೋ ಬರೆಯುತ್ತಿದ್ದನು. ಪ್ರಫುಲ್ಲನು ಕೆಳಗಿನಿಂದ 'ಕಾಕಾ' ಎಂದು ಕೂಗಿದನು. ಪ್ರಮಥನು 'ಏನು ಪ್ರಫುಲ್ಲಾ!

ಒಂದು ಕೋಣೆಯೊಳಗೆ ದೀನ ಸ್ವರದಿಂದ 'ಪ್ರಮಥ!' ಎಂದು ಆತನ ತಾಯಿಯು ಕೂಗುತ್ತಿದ್ದಳು. ಆಕೆಯು ಈಗ ಒಂದು ತಿಂಗಳಿನಿಂದಲೂ ಖಾಯಿಲೆಯಿಂದ ಹಾಸಿಗೆಹಿಡಿದಿದ್ದಳು. ಪ್ರಮಥನು ಬೇಕುಬೇಕಾದ ಚಿಕಿತ್ಸೆಗಳನ್ನು ಮಾಡಿಸಿದರೂ ಏನೂ ಪ್ರಯೋಜನಕ್ಕೆ ಬರುವಂತಿದ್ದಿಲ್ಲ. ಪ್ರಮಥನು ತೀರಾ ನಿರಾಶನಾಗಿದ್ದನು. ಆದರೂ ಡಾಕ್ಟರರ ಸಲಹೆಯಂತೆ ಚಿಕಿತ್ಸೆಯೂ ಪಥ್ಯವೂ ನಡೆದಿತ್ತು. ಪರಿಚಾರಕರಿಗೆ ನಿಯಮಿಸಿದ್ದ ಹೆಂಗಸು ಗಂಜಿಯ ನೀರನ್ನು ಕುಡಿಸುತ್ತಿದ್ದಳು. ರುಗ್ಣಳು ಅದನ್ನು ತೂಯೆಂದು ಉಗುಳುತ್ತಿದ್ದು, 'ಪ್ರಮಥ! ಪ್ರಮಥ!' ಎಂದು ಒದರತೊಡಗಿದಾಗ ಹತ್ತಿರವೇ ನಿಂತಿದ್ದ ಪ್ರಪುಲ್ಲನು ಪ್ರಮಥನನ್ನು ಹಿಂದೆ ಹೇಳಿದಂತೆ ಕೂಗಿದನು.

ಪ್ರಮಥನು ಬಂದ ಕೂಡಲೇ ತಾಯಿಯು ತುಂಬಾ ಆತುರದಿಂದ ಆತನನ್ನೇ ನಟ್ಟ ದೃಷ್ಟಿಯಿಂದ ನೋಡತೊಡಗಿದಳು. 'ಅಮ್ಮಾ!' ಎಂದು ಪ್ರಮಥನು ಹತ್ತಿರ ಬಂದು ತಡವರಿಸತೊಡಗಿದನು.

ಪ್ರಮಥನು 'ಅಮ್ಮಾ, ಏನಾಗುತ್ತದೆ? ಗಂಜಿಯನ್ನೇಕೆ ಕುಡಿಯಲೊಲ್ಲೆ?' ಎಂದನು.

**ತಾಯಿ**—ಮಗು! ನನಗಿನ್ನಾವುದೂ ಬೇಡ. ನಾನು ಹೊರಟು ಹೋಗುತ್ತೇನೆ.

**ಪ್ರಮಥ**—ಹಾಗೇಕಮ್ಮಾ ಹೇಳುವೆ?

**ತಾಯಿ**—ಇದ್ದುದನ್ನೇ ಹೇಳಿದೆ ಮಗು. ನನಗಿನ್ನೇನಾಗಬೇಕಾಗಿದೆ. ಆದರೆ....

**ಪ್ರಮಥ**—ಆದರೇನಮ್ಮಾ?

**ತಾಯಿ**—ಏನ ಹೇಳಲಿ? ನೀನೆಂದು ಸುಖಿಯಾಗುವೆ?

**ಪ್ರಮಥ**—ಅಮ್ಮಾ ಇದೇನು ಹೀಗೆ ಹೇಳುವೆ? ಅಷ್ಟಕ್ಕಾಗಿ ನೀನು ಕಳವಳಗೊಳ್ಳಬೇಡಮ್ಮಾ. ನಾನು ಸುಖಿಯಾಗಿಯೇ ಇದ್ದೇನೆ.

**ತಾಯಿ**—ನನಗೆ ತಿಳಿಯದೆ!

**ಪ್ರಮಥ**—ಇಲ್ಲಮ್ಮಾ! ನಾನು ಈಗ ನಿಶ್ಚಿಂತನಾಗಿದ್ದೇನೆ. ಈ ಸಂಸಾರವೆಲ್ಲಾ ಒಂದು ಹವ್ಯಾಸವಮ್ಮಾ. ಸದ್ಯಕ್ಕೆ ನಾನು ಅದರಿಂದ ದೂರವಾಗತೊಡಗಿದ್ದೇನೆ.

**ತಾಯಿ**—ನಾನೊಂದನ್ನು ಹೇಳುವೆನು ಕೇಳುವೆಯಾ?

**ಪ್ರಮಥ**—ಏನಮ್ಮಾ ಅದು?

**ತಾಯಿ**—ನೋಡು, ಮೇದಿನೀಪುರದ ವಿಮಾಲಾನಂದ ಭಟ್ಟಾಚಾರ್ಯ........

**ಪ್ರಮಥ**—ಅಮ್ಮಾ! ತಿಳಿಯಿತು. ಹಿಂದೊಮ್ಮೆ ಹೇಳಿದ್ದೆಯಲ್ಲಮ್ಮಾ!

**ತಾಯಿ**—ಅಹುದು. ಈಗೊಮ್ಮೆ ಹೇಳಬೇಕೆಂದೆನಿಸಿತು.

**ಪ್ರಮಥ**—ಬೇಡಮ್ಮಾ. ನನಗೆ ಯೋಗ್ಯತೆಯಿಲ್ಲಮ್ಮಾ.

**ತಾಯಿ**—ಹಾಗೆಂದರೇನೋ ಪ್ರಮಥ! ನಿನಗೇನು ಕೊರತೆಯಾಗಿದೆ ಹೇಳು. ಅವರು ತುಂಬಾ ನೀತಿವಂತರು. ನಿನ್ನ ತಂದೆಗೆ ಆಪ್ತರು. ನೀನು ಪ್ರಸ್ತಾವಿಸಿದರೆ ದಮ್ಮಯ್ಯ ಎಂದು ಕೊಡುವರೋ ಮಗು. ನನ್ನ ಮಾತನ್ನು ಬಿಟ್ಟುಹಾಕಬೇಡ.

**ಪ್ರಮಥ**—ಅಮ್ಮಾ, ಕ್ಷಮಿಸು. ನಾನೀಗ ಏನನ್ನೂ ಹೇಳಲಾರೆ. ಅಮ್ಮಾ! ಇದೋ

ಎಂದು ಹೇಳುತ್ತಾ ಪ್ರಮಥನು ಪ್ರಫುಲ್ಲನನ್ನು ಹತ್ತಿರ ಕರೆದು ತಾಯಿಗೆ ತೋರಿದನು. ಹಾಗೂ 'ಅಮ್ಮಾ! ನೀನು ಹೇಗಿದ್ದರೂ ಶಾಂತಿಯನ್ನು ಹೊಂದಬೇಕು. ಬರಿದೆ ಈ ಕ್ಷಣಿಕ ಸಂಸಾರದ ಗೊಂದಲವನ್ನು ಇನ್ನೂ ಹಚ್ಚಿಕೊಳ್ಳಲೇಕಮ್ಮಾ?' ಎಂದನು.

ಅಷ್ಟರಲ್ಲಿ ಪ್ರಫುಲ್ಲನು 'ಕಾಕಾ! ಆಗಲೆಂದುಬಿಡಿ, ದೊಡ್ಡಮ್ಮಗೊಂದಿಷ್ಟು ಸಮಾಧಾನ ವಾಗುವುದು' ಎಂದು ಹೇಳಿದನು.

**ಪ್ರಮಥ**—ಛೆ! ಮನಸ್ಸಿನಲ್ಲೊಂದು, ಬಾಯಲ್ಲೊಂದು ಇಟ್ಟುಕೊಳ್ಳಬಾರದು ಪ್ರಫುಲ್ಲ! ಅಲ್ಲದೆ, ಹಿರಿಯರು ಮೃತ್ಯುಶಯ್ಯೆಯಲ್ಲಿ ಕೇಳಿದ್ದನ್ನು ನಡೆಸಿಕೊಡಲೇ ಬೇಕಾಗುವುದು. ಕೇಳು, ಸಂಸಾರ ಮೋಹವು ದೊಡ್ಡದು. ಅಲ್ಲವಾದರೆ, ಎಲ್ಲವನ್ನೂ ಬಿಟ್ಟು ಹೋಗುವವ ರಿಗೆ ಉಳಿಯುವರ ಚಿಂತೆಯೇಕೆ? ಆದುದರಿಂದ, ಅವರು ಮೋಹಾತಿಶಯದಿಂದ ಎನೇನನ್ನೊ ಕೇಳಿದರೂ ನಾವು ಆಲೋಚಿಸದೆ ಉತ್ತರವನ್ನೀಯಬಾರದು. ಅವರಿಗೆ ಆದಷ್ಟು ವಿರಕ್ತಿ ಯುಂಟಾಗುವಂತೆಯೇ ಬೋಧಿಸಬೇಕು.

ಅಷ್ಟರಲ್ಲಿ ತಾಯಿಯು ಆಯಾಸದಿಂದ ತುಸು ಕಣ್ಣು ಮುಚ್ಚಿಕೊಂಡಿದ್ದವಳು ಕಣ್ಣು ಗಳನ್ನು ತೆರೆದು ಪ್ರಮಥನನ್ನು ನೋಡಿ 'ಹಾಗಾದರೆ ಪ್ರಮಥನು ಸನ್ಯಾಸಿಯೆ?' ಎಂದಳು.

ಪ್ರಮಥನು 'ಏನೋ ಅಮ್ಮಾ ಅದಕ್ಕೂ ಯೋಗ್ಯತೆ ಬೇಕು' ಎನ್ನುತ್ತಿರುವಾಗ ತಾಯಿ ಯು 'ನಾರಾಯಣ ನಾರಾಯಣ' ಎಂದು ದೇವರ ನಾಮಗಳನ್ನು ಹೇಳತೊಡಗಿದಳು.

ಪ್ರಫುಲ್ಲನು ಗಾಬರಿಗೊಂಡು 'ಕಾಕಾ! ಇದೇನು?' ಎಂದು ಕೂಗಿದನು.

ಪ್ರಮಥನು 'ಪ್ರಫುಲ್ಲಾ! ಹುಟ್ಟಿಬಂದವರಿಗೆಲ್ಲಾ ಇದ್ದುದೇ ಇದು. ಮಗನೆ! ನೀನೂ ದೇವರನ್ನು ಸ್ಮರಿಸು' ಎಂದನು.

## ಹತ್ತನೆಯ ಪರಿಚ್ಛೇದ

ಕಾಲವು ಯಾರನ್ನೂ ನಿರೀಕ್ಷಿಸುವುದಿಲ್ಲ. ದಿನಗಳಮೇಲೆ ದಿನಗಳು, ತಿಂಗಳುಗಳ ಮೇಲೆ ತಿಂಗಳೆಂಬಂತೆ ನಿರಂತರ ಅದು ಸಲ್ಲುತ್ತಿದೆ. ಅದರ ಆದ್ಯಂತಗಳನ್ನು ಕಂಡವರಿಲ್ಲ. ಅನಂತಕಾಲದಲ್ಲಿ ಮನುಷ್ಯಾಯುಷ್ಯವೇ ಒಂದು ಮಿಂಚಿನ ಕಾಲ. ಆ ಕಾಲರೂಪೀ ಪರಮಾ ತ್ಮನ ಒಂದು ರೆಪ್ಪೆಯ ಬಡಿತದೊಳಗೆ ಯುಗ-ಯುಗಾಂತರಗಳು ಸೇರಿಕೊಂಡಿವೆ. ಮಳೆಯು ಸುರಿಯುತ್ತಿರುವಾಗ ಕ್ಷಣಕ್ಷಣವೂ ಲಕ್ಷೋಪಲಕ್ಷ ನೀರ್ಗುಳ್ಳೆಗಳು ಹುಟ್ಟಿಯಡಗುತ್ತಿರುವಂತೆ ಈ ಕಾಲ ಪ್ರವಾಹದ ಅಲೆಯಲೆಗಳಲ್ಲೂ ಪ್ರಾಣಗಳ ರಾಶಿರಾಶಿಗಳೇ ಮೂಡಿಯಡಗುತ್ತಿವೆ. ಇಂತಹ ಪ್ರಕೃತಿನಿಯಮಕ್ಕೊಳಗಾಗಿದ್ದರೂ ಅಜ್ಞಾನಿಮನುಷ್ಯನು ಅಹಂಕರಿಸಿ ದಂಡ-ದಾಂಧ ಲೆಗಳಿಗೆ ಗುರಿಯಾಗಿರುತ್ತಾನೆ. ದೇಹ-ಮೋಹಗಳಿಂದಾಗಿ ಧಾವತಿಪಡುತ್ತಿದ್ದಾನೆ. ಆಶಾ-ದ್ವೇಷಗಳಿಂದಾಗಿ ಉರಿಯುತ್ತಿದ್ದಾನೆ. ಆಧಿ-ವ್ಯಾಧಿಗಳಿಂದ ಬೇಯುತ್ತಿದ್ದಾನೆ. ಏನಿದ್ದರೂ ಭಗವನ್ಮಾಯೆಯು ದುರ್ನಿವಾರ್ಯೆಯು.

ನಮ್ಮ ಪ್ರಮಥನಾಥನೂ ಈ ಕಾಲಪ್ರವಾಹದಲ್ಲಿ ಸಿಕ್ಕು ಬೇಯುತ್ತಿರುವವರಲ್ಲೊ ಬ್ಬನು. ಕುಲೀನ ವಿದ್ಯಾವಂತ ನಾಗರಿಕ ಯುವಕನ ಜೀವನವು ಹೀಗೇಕೆ? ಸುಂದರ ಶಿಕ್ಷಿತ

ಪಾತಿವ್ರತ್ಯ-ವಿಧೇಯತೆಗಳ ಅವಮಾನದ ಪರಿಣಾಮ. ನವ್ಯ ಶಿಕ್ಷಣ, ನವ ನಾಗರಿಕತೆ, ಸ್ವಾತಂತ್ರ್ಯಗಳಿಂದ ಸ್ತ್ರೀಸಮಾಜವು ಯಾವ ರೀತಿ ಮಾರ್ಪಡುವುದೆಂದೂ ಅದರಿಂದ ಸಮಾಜ ಜೀವನವು ಯಾವರೀತಿ ನಿಪಾತವಾಗುವುದೆಂದೂ ತೋರಿಸಿಕೊಡುತ್ತಿರುವ ಸ್ಪಷ್ಟ ದೃಷ್ಟಾಂತವಿದು. ಪ್ರಮಥನು ಈಗೀಗ ಒಂದು ತೆರನಾಗಿದ್ದನು. ತಾಯಿಯು ಎಂದೋ ದೈವಾಧೀನಳಾಗಿದ್ದಳು, ಮುಂಬೆಳಕೆಂದರೆ ಪ್ರಫುಲ್ಲನೊಬ್ಬನು. ತಾನಿನ್ನು ದಾಂಪತ್ಯ ಜೀವನದ ಹವ್ಯಾಸಕ್ಕೆ ಬೀಳಲಾಗದೆಂದೇ ಆತನ ನಿರ್ಧಾರವಾಯಿತು.

ಪ್ರಮಥನು ಎಲ್ಲಾದರೂ ದೇಶಾಂತರ ಹೊರಟುಬಿಟ್ಟು ಏಕಾಂತವಾಗಿ ತಾತ್ವಿಕ ವಿಚಾರಗಳನ್ನು ನಡೆಸುತ್ತಾ ಕಾಲಯಾಪನೆಯನ್ನು ಮಾಡಬೇಕೆಂದು ಯೋಚಿಸಹತ್ತಿದನು. ಹೊತ್ತು ಹೊತ್ತಿನ ಅನ್ನ ನೀರುಗಳಲ್ಲೇ ಔದಾಸೀನ್ಯವನ್ನು ವಹಿಸತೊಡಗಿದನು. ತಕ್ಕಷ್ಟು ವಯಸ್ಸಿಗೆ ಬಂದಿದ್ದ ಪ್ರಫುಲ್ಲನು ಒಮ್ಮೊಮ್ಮೆ ಕಾಕಾನಿಗೆ ವಿನಯಪೂರ್ವಕವಾದ ಎಚ್ಚರಿಕೆಗಳನ್ನೂ ಕೊಡಬೇಕಾಗಿ ಬರುತ್ತಿತ್ತು. ಆದರೆ ಪ್ರಮಥನು ಇಷ್ಟು ವಿರಕ್ತಿಮುದ್ರೆಯನ್ನು ಅಂತರಂಗದಲ್ಲಿ ಮಾತ್ರವೇ ತಾಳಿದ್ದನಲ್ಲದೆ ಬಾಹ್ಯದೃಷ್ಟಿಯಿಂದ ಎಲ್ಲವೂ ಇದ್ದಂತೆಯೇ ಇದ್ದವು; ಕಾಲೇಜಿನ ವೃತ್ತಿಯೂ ನಡೆದೇ ಇತ್ತು. ಮನೆಯಲ್ಲಿ ಒಬ್ಬೊಬ್ಬ ಚಾಕರಿಯವರನ್ನೂ ಇಟ್ಟುಕೊಂಡಿದ್ದು ಗಾರ್ಹಸ್ಥ್ಯವನ್ನೂ ಚೆನ್ನಾಗಿ ನೋಡಿಕೊಳ್ಳುತ್ತಿದ್ದನು. ಆತನ ದಾಂಪತ್ಯದ ಛಿದ್ರವನ್ನಾದರೂ ಬಲ್ಲವರೇ ಬಲ್ಲರಲ್ಲದೆ, ಪರಕೀಯರಾರೂ ಈ ಯಾವುದೊಂದು ವಿಚಾರಗಳನ್ನೂ ಅರಿಯರು. ವ್ಯವಹಾರವೆಲ್ಲವೂ ಸುಸೂತ್ರವಾಗಿಯೇ ನಡೆಯುತ್ತಿತ್ತು.

ಒಂದು ದಿನ ಮಧ್ಯಾಹ್ನ ಪ್ರಮಥನು ಸುಖಾಸನದಲ್ಲಿ ಒರಗಿ ಯೋಚನಾಮಗ್ನನಾಗಿದ್ದನು. ಆಗ ಟಪ್ಪಾಲು ಜವಾನನು ಬಂದು ಒಂದು ತಂತೀವಾರ್ತೆಯನ್ನು ಕೊಟ್ಟುಹೋದನು. ಪ್ರಥಮನು ಬಿಡಿಸಿ ಓದಿದನು.

"ಪ್ರಿಯಮಿತ್ರ! ಕಲ್ಕತ್ತಾ, 26-2-'35

ಮಹತ್ವದ ಕಾರ್ಯಕ್ಕಾಗಿ ಕೂಡಲೇ ಹೊರಟು ಬಾ!

ಗೋಪೀನಾಥ"

ಮರುದಿನವೇ ಪ್ರಮಥನು ಹೊರಟುಹೋದನು.

---

## ಹನ್ನೊಂದನೆಯ ಪರಿಚ್ಛೇದ

'ನೀವು ಹೇಳುವುದಾದರೂ ಏನು?'

'ಅಲ್ಲ, ಇದೆಂತಹ ಉಪೇಕ್ಷೆ!'

'ಮಿಸ್ಟರ್ ಪ್ರಮಥನಾಥ! ನಿಮ್ಮಂತಹರು ಹೀಗೆ ಉಪೇಕ್ಷಿಸಿ ಸಮಾಜದಲ್ಲಿ ಇನ್ನೂ ಬಿಕ್ಕಟ್ಟಿನ ಪ್ರಸಂಗಗಳನ್ನು ಬೆಳೆಯಿಸುವಿರಿ, ನೋಡಿ.'

'ಪ್ರಿಯಮಿತ್ರ! ದುರಾಚಾರಗಳಿಗೆ ಶಾಸ್ತಿ ಬೇಡವೇ?'

'ನಮ್ಮಿಂದ ಸಾಧ್ಯವೇ?'

'ಇಲ್ಲಿ ಕೇಳಿರಿ. ಇಷ್ಟೊಂದು ಆಧಾರಗಳಿವೆ.'

'ಮಿಸ್ಟರ್ ಕೋರ್! ನಿಮ್ಮ ಪತ್ರವೆಲ್ಲಿ?'

'ಇಲ್ಲೇ ಇದೆ. ಅದರ ಆಧಾರದಿಂದ ಎಷ್ಟೋ ಸಾಕ್ಷಿಗಳನ್ನು ನಾನು ತೋರಿಸಿಕೊಡ ಬಲ್ಲೆ.'

'ಕೆಪ್ಟನ್! ಬಲವದ್ವಿರೋಧ! ಬಲವದ್ವಿರೋಧ!'

'ಮಿತ್ರ! ಬಲಕ್ಕೇ ಜಯ, ನ್ಯಾಯಕ್ಕಿಲ್ಲವೆಂದಾದರೂ ಆಗಲಿ.'

'ನ್ಯಾಯ–ನೀತಿಗಳು ದಿನದಿಂದ ದಿನಕ್ಕೆ ಕೆಡುತ್ತಿವೆ. ದೊಡ್ಡ ದೊಡ್ಡ ಮನುಷ್ಯರೇ ಘೋರ ಅತಿಘೋರ ದುರಾಚಾರಗಳಿಗೆ ಬಲಿಬಿದ್ದಿದ್ದಾರೆ. ಕೇಳುವರಾರು?'

'ಮಿತ್ರ! ಅಂತರಂಗದಲ್ಲಿ ಎಷ್ಟು ದುರಾಚಾರಿಗಳಾದರೂ ಬಾಹ್ಯ ಪ್ರಪಂಚದಲ್ಲಿ ಅವರ ಸ್ಥಾನ–ಮಾನಗಳಾವುದಕ್ಕೂ ಚ್ಯುತಿಯಿಲ್ಲದೆ ಸಾಗುತ್ತಿರುವುದು ಸೋಜಿಗದ ಸಂಗತಿ!'

'ಹಣ ಮತ್ತು ಪದವಿಗಳಿದ್ದಲ್ಲಿ ಈ ಕಾಲದಲ್ಲಿ ಯಾವುದನ್ನೂ ದಕ್ಕಿಸಿಕೊಳ್ಳಬಹುದು.'

'ಇರಲಿ, ಇನ್ಸ್‌ಪೆಕ್ಟರ್! ತಾವು ಮೊನ್ನೆ ಹೇಳಿದೊಂದು ವಿಚಾರವೇನು?'

'ಯಾವುದು? ಆ ಝಡತಿಯ ಸಮಾಚಾರವೇ?'

'ಯಾವ ಝಡತಿ?'

'ಒಂದು ಕಡೆ ಝಡತಿಯನ್ನು ನಡೆಯಿಸಬೇಕಾಗಿದೆ. ಇನ್ನೂ ಕೆಲವು ಆಧಾರಗಳು ದೊರೆಯಬಹುದೆಂದೆಣಿಸುತ್ತೇನೆ.'

'ಮಿತ್ರ! ಸಾಹಸಪಡಬಾರದೆಂದೇನೂ ನನಗಿಲ್ಲ. ನನ್ನಲ್ಲೂ ತುಂಬಾ ಆಧಾರಗಳಿವೆ.'

'ಮತ್ತೇಕೆ ಹಿಂಜರಿಯುವೆ?'

'ಪ್ರಮಥನಾಥ! ಮನೆಯೇ ಲುಟಾಯಿಸಲ್ಪಡುವಾಗ ತೋರದ ಪೌರುಷವು ಇನ್ನೆಲ್ಲಿ ತೋರತಕ್ಕದ್ದು?'

'ಮಿಸ್ಟರ್ ಕೋರ್! ಇಂದೇ ಸಂಜೆ ನಾನು ಝಡತಿಯನ್ನೂ ನಡೆಯಿಸಿಬಿಡುವೆನು. ನೀವೆಲ್ಲರೂ ಇರಬೇಕು.'

'ಅದು ಯಾವ ಬೀದಿಯಲ್ಲಿ?'

'ಸರದಾರ ಶಂಕರ್ ರೋಡಿನಲ್ಲಿ.'

'ನೀವೆಲ್ಲಿರುವಿರಿ?'

'ನಾನಿಲ್ಲೇ ಇರುವೆನು.'

'ಅಹುದು, ಅವರು ಇಲ್ಲೇ ಇರುವರು.'

'ಗೋಪೀನಾಥ! ಹಾಗಾದರೆ ನಾವು ಸಂಜೆ ೫ ಘಂಟೆಗೆ ಸರಿಯಾಗಿ ಇದೇ ಮಾರ್ಗವಾಗಿ ಬರುವೆವು.'

'ಹಾಗೇ ಆಗಲಿ.'

ಕಲಿಕತ್ತೆಯ ಗೋಪೀನಾಥ ವಿಶ್ವಾಸರ ಮನೆಯಲ್ಲಿ ಈ ಮೇಲಿನಂತೆ ಸಂಭಾಷಣೆ ಯೊಂದು ನಡೆಯಿತು.

# ಹನ್ನೆರಡನೆಯ ಪರಿಚ್ಛೇದ

ಅಷ್ಟಮಿಯ ಚಂದ್ರಪ್ರಕಾಶವು ಹೂಗ್ಲಿ ನದಿಯ ತರಂಗಗಳೊಡನೆ ನರ್ತಿಸುತ್ತಿತ್ತು. ಎಲ್ಲೆಲ್ಲೂ ಬೆಳಗುತ್ತಿರುವ ವಿದ್ಯುದ್ದೀಪಗಳು ಗಂಗೆಯ ನೀಲಿಮ ಪ್ರವಾಹದಲ್ಲಿ ಪ್ರತಿಫಲಿಸಿ ಅದಕ್ಕೆ ಜರಿಯ ಚುಕ್ಕಿಗಳುಳ್ಳ ನೀಲಾಂಬರದ ಶೋಭೆಯನ್ನುಂಟುಮಾಡಿದ್ದುವು. ಸಂಧ್ಯಾ ಸಮಯದ ತಂಗಾಳಿಗೆ ಮೈಯೊಡ್ಡಿ ಸುಖಜೀವಿಗಳಾದ ನಾಗರಿಕ ಯುವಕ-ಯುವತಿಯರು ನದಿಯ ದಂಡೆಯ ವಿಶಾಲ ಮಾರ್ಗಗಳಲ್ಲೂ ಘಾಟುಗಳಲ್ಲೂ ಮಂದಗತಿಯಿಂದ ಸಂಚರಿಸುತ್ತಿದ್ದರು. ಹಲವರು ಅಲ್ಲಲ್ಲಿ ಕುಳಿತುಕೊಂಡು ಭೂವ್ಯಾಕಾಶಗಳ ಗಂಭೀರ ಮನೋಹರ ಪ್ರಕೃತಿ ಸೌಂದರ್ಯವನ್ನು ಪರಿಕಿಸುತ್ತಿದುವರು.

ನದಿಯ ಸೋಪಾನಗಳಲ್ಲಿ ಒತ್ತಟ್ಟಿಗೆ ಒಬ್ಬ ಯುವಕನು ಏಕಾಂಗಿಯಾಗಿ ಕುಳಿತಿರುವನು. ಆತನ ಕಣ್ಣಿಗೆ ಮಾತ್ರ ಈ ಯಾವ ಪ್ರಕೃತಿಸೌಂದರ್ಯವೂ ಕಾಣುತ್ತಿದ್ದಿಲ್ಲ. ಆದರೆ ಆತನು ಕುರುಡನಲ್ಲ. ಈ ವಿಶ್ವಚಿತ್ರವೆಲ್ಲಾ ಆತನ ಕಣ್ಣುಗೊಂಬೆಗಳಲ್ಲಿ ಪ್ರತಿಬಿಂಬತವಾಗಿರಬಹುದು. ಆತನ ಮನಸ್ಸು ಮಾತ್ರ ಕಣ್ಣಿನ ಕಡೆಗೆ ಬೀಸಿರುವುದಿಲ್ಲ. ಅದು ಸುಳಿಗಾಳಿಯಂತೆ ತನ್ನೊಳಗೇ ಸುತ್ತುತ್ತಿದೆ. ತರಗೆಲೆಗಳಂತೆ ಅದರೊಡನೆ ನೂರಾರು ವಿಷಯಗಳು ಸರಸರನೆ ಸುತ್ತುತ್ತೊಡಗಿವೆ. ಈ ಭ್ರಮಣವನ್ನು ತಡೆದಿರಿಸಲು ನದಿಯ ಪ್ರವಾಹವೂ ಶಕ್ತವಲ್ಲ. ಈ ಬೇಗೆಯನ್ನು ಶಾಂತಗೊಳಿಸಲು ಚಂದ್ರಪ್ರಕಾಶವೂ ಸಮರ್ಥವಲ್ಲ.

ಯುವಕನು ಮೇಲಿಂದ ಮೇಲೆ ಬೀದಿಯ ಕಡೆ ನೋಡುತ್ತಿದ್ದನು. ತುಸು ಹೊತ್ತಿನಲ್ಲಿ ಇನ್ನೊಬ್ಬ ಯುವಕನು ಅತ್ತಕಡೆಯಿಂದ ಬಂದು ಈತನ ಹತ್ತಿರ ಕುಳಿತುಕೊಂಡನು. ಹಾಗೂ ಆ ಬಂದ ಯುವಕನು 'ದಾಖಲಾಯಿತೆ?' ಎಂದು ಕೇಳಿದನು.

'ಆಯಿತು.'

'ನಾನಿನ್ನೊಂದು ಸಾಕ್ಷಿಯನ್ನು ಸಂಗ್ರಹಿಸಿರುವೆ.'

'ಅದಾರು?'

'ದಿಲ್ಲಿಯಲ್ಲಿದ್ದಾಗಿನ ಕೃತ್ಯಗಳನ್ನು ಪ್ರತ್ಯಕ್ಷವಾಗಿ ಕಂಡವನವನು.

'ಚೌಧುರಿಯವರ ಕಾರಿನ ಚಾಲಕನೋ?'

'ಅಹುದು.'

'ವಿನೋದವಿಹಾರಿಯೆಲ್ಲಿ?'

'ಈಗ ಬರಬಹುದು, ಬೆನರ್ಜಿಯವರೇನೆಂದರು?'

'ಅನ್ನುವುದೇನು, ಸತ್ಯ ವಿಚಾರವು ತನಗೆ ತಿಳಿಯಿತು. ಯತ್ನಿಸುವೆನೆಂದರು.

'ಸಂದೇಹವೇನು.'

'ನನಗೆ ಇನ್ನೂ ಸಂದೇಹವೇ.'

'ನ್ಯಾಯಕ್ಕೆ ಜಯವಾಗುವಲ್ಲಿ ನೀವು ಸಂದೇಹಪಡಲು ಕಾರಣವಿಲ್ಲ.'

'ನನಗೆ ಅದರಲ್ಲೂ ಸಂದೇಹವೇ.'

'ಸಂಶಯಾತ್ಮಾ ವಿನಶ್ಯತಿ'

'ಅದರಲ್ಲಿ ಸಂದೇಹವಿಲ್ಲ.'

'ಮತ್ತೇಕೆ ಯೋಚನೆ?'

'ಯೋಚನೆಯಿಲ್ಲದಿರುವುದೆಂತು?'

'ಆದುದಾಗುತ್ತೆ. ಧೈರ್ಯವಾಗಿರಬೇಕು.'

'ಇನ್ನಷ್ಟೆ.'

'ವಿಭೂತೀ ಭೂಷಣರೊಡನೆ ಎಂದು ಮಾತನಾಡುವುದು?'

'ನಾಳೆ ನನಗೆ ಕೃಷ್ಣಗಡಕ್ಕೆ ಹೊರಡಬೇಕು.'

'ಅದಾಗದು. ನಾಳೆಗೆ ನೀವು ನಿಲ್ಲಬೇಕು. ವಿಭೂತಿಬಾಬುಗಳೊಡನೆ ನಾಳೆ ಮಾತನಾಡುವ.'

'ಸಾಧ್ಯವಿದ್ದರೆ ಇಂದೇ ಅವರ ಭೆಟ್ಟಿ ತಗೊಳ್ಳಬಹುದಿತ್ತು.'

'ಆ ದಾರಿಯಿಂದಲೇ ಹೋಗುವ. ಒಂದು ವೇಳೆ ಅವರ ಭೆಟ್ಟಿಯು ಇಂದೇ ಆದರೂ ನೀವು ನಾಳೆಯ ಮಟ್ಟಿಗೆ ನಿಲ್ಲಲೇಬೇಕು. ನಿಮ್ಮೊಡನೆ ಇನ್ನು ಕೆಲವು ಮಾತುಗಳನ್ನು ನಿರ್ಣಯಿಸಿಕೊಳ್ಳಲಿಕ್ಕಿದೆ. ನೀವು ಇನ್ನು ಬರುವುದಾವಾಗ?'

'ಬರುವ ಶನಿವಾರ.'

'ನಾವೆಲ್ಲಾ ಬೆನರ್ಜಿಯವರೊಡನೆ ಮಾತಾಡುವುದಾವಾಗ?'

'ನಾನು ನಾಡಿದು ಬಂದಾಗ ಸಾಕೆಂದರು.'

'ಈಗ ಹೊರಡೋಣವೇ?'

'ವಿನೋದನು ಬಂದಿಲ್ಲವಲ್ಲ.'

'ಆತನು ನಮಗೆ ಎದುರು ಸಿಗಲೂಬಹುದು.'

ಇಷ್ಟು ಮಾತುಗಳನ್ನಾಡಿಕೊಂಡು ಯುವಕರಿಬ್ಬರೂ ಅಲ್ಲಿಂದೆದ್ದು ಹೊರಟರು. ಈ ಯುವಕರಾರೆಂದು ವಾಚಕರೀಗಲೇ ತರ್ಕಿಸಿರಬಹುದು. ಮೊದಲನೆಯವನು ನಮ್ಮ ಪ್ರಮಥನಾಥ. ಎರಡನೆಯವನು ಆತನ ಮಿತ್ರನಾದ ಗೋಪೀನಾಥ.

ಮಿತ್ರಕೂಟದವರ ಸಲಹೆಯಂತೆ ಪ್ರಮಥನಾಥನು ಸುರೇಶಚಂದ್ರಪಾಲನ ಮೇಲೆ ವ್ಯಭಿಚಾರದ ತಪ್ಪನ್ನು ಕಾಣಿಸಿ ಮೊಕದ್ದಮೆಯನ್ನು ಅಂದೇ ದಾಖಲುಗೊಳಿಸಿದ್ದನು. ತಕ್ಕ ಸಾಕ್ಷಿಗಳನ್ನೂ ಬೇಕಾದ ಪತ್ರ ಆಧಾರಗಳನ್ನೂ ಮಿತ್ರಕೂಟದವರು ಸಂಗ್ರಹಿಸಿ ಕೊಟ್ಟರು. ಇಷ್ಟಾದರೂ ಪ್ರಮಥನ ಹೃದಯವೇಕೋ ತತ್ತರಿಸುತ್ತಲೇ ಇತ್ತು. ಆತನ ಮನಸ್ಸು ಶುದ್ಧವಾಗಿದ್ದಿಲ್ಲ. ಪ್ರತ್ಯಕ್ಷ ದುರಾಚಾರವನ್ನು ಕಂಡೂ ಸ್ವಾರ್ಥಕ್ಕಾಗಿ ಅದನ್ನು ಮುಚ್ಚಿಟ್ಟು ಬಾಹ್ಯಾಡಂಬರವನ್ನು ಸರಿಯಾಗಿ ಮುಂದುವರಿಸುತ್ತಿದ್ದುದೇ ಆತನ ಮನಶ್ಚಾಂಚಲ್ಯಕ್ಕೆ ಕಾರಣವಾಗಿತ್ತು. ಇದು ಮುಂದೆ ಆತನ ವಾಙ್ಮೂಲಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಈ ರೀತಿಯ ವರ್ತನೆಯಿಂದಾಗಿಯೇ ಆತನು ಮೊಕದ್ದಮೆಯನ್ನು ಹೂಡಲೂ ಹಿಂಜರಿಯುತ್ತಿದ್ದುದು. ಆದರೇನು? ಈ ರೀತಿಯ ಇವನ ವ್ಯವಹಾರ

ಗಳನ್ನರಿಯದ, ಅರಿತಿದ್ದರೂ ಅದನ್ನು ಗಣ್ಯಕ್ಕೆ ತಾರದ ಮಿತ್ರವರ್ಗವು ಮೊಕದ್ದಮೆಯನ್ನು ಹೂಡಲು ಪ್ರೋತ್ಸಾಹಿಸಿತು. ಹೂಡಿಯೂ ಆಯಿತು.

ಪ್ರಮಥನು ಮಾತ್ರ ಇನ್ನೂ ಕಳವಳಕ್ಕೀಡಾದನು. ಸುರೇಶನು ಸಾಮಾನ್ಯ ಕಿಲಾಡಿಯಿದ್ದಿಲ್ಲ. ಅದು ಆತನಿಗೆ ಚೆನ್ನಾಗಿ ಗೊತ್ತಿತ್ತು. ಆತನ ಹೇಡಿತನಕ್ಕೆ ಇದೂ ಒಂದು ಕಾರಣವಾಗಿತ್ತು. ಆಪಾದನೆಯು ಕೊನೆಮುಟ್ಟದೆ ಹೋದರೆ ಅದು ಆತನ ಮೇಲೆಯೇ ಜರಿದುಬೀಳುವ ಸಂದರ್ಭ. ಸ್ವೈರಿಣಿಯನ್ನು ತಿರಸ್ಕರಿಸಲಾರದ ಹೇಡಿಯೆಂದು ಜನಜನಿತವಾಗುವುದು. ಅಂತೂ ತನ್ನ ಸ್ಥಾನಮಾನಗಳ ದಿವಾಳಿಯೇ ಆಗಲಿರುವಂತಹ ವಿಷಮಪರಿಸ್ಥಿತಿಯೊಂದಕ್ಕೆ ಇಂದು ತಲೆಗೊಟ್ಟೆನೆಂದು ಪ್ರಮಥನಿಗೆ ಖಚಿತವಾಯಿತು.

---

## ಹದಿಮೂರನೆಯ ಪರಿಚ್ಛೇದ

ಮೊಕದ್ದಮೆಯ ವಿಚಾರಣೆಗೆ ಮೊದಲಾಯಿತು. ಮೊದಲನೆಯ ದಿನವೆಲ್ಲಾ ಪ್ರಮಥನಾಥನ ವಿಚಾರಣೆಯಾಯಿತು. ಶ್ರೀಮತೀ ವೀಣೆಯನ್ನು ಕಂಡಂದಿನಿಂದ ಅಂದಿನ ವರೆಗಿನ ಆತನ ದಾಂಪತ್ಯದ ಚರಿತ್ರೆಯನ್ನೆಲ್ಲಾ ಅಂದು ಪ್ರಮಥನು ಬಹಿರಂಗವಾಗಿ ಕೋರ್ಟಿಗೆ ಶ್ರುತಗೊಳಿಸಿದನು ಆ ಸಮಯದಲ್ಲಿ ಆತನ ಅಂತರಂಗವನ್ನು ಕೋಪ-ಸಂತಾಪ-ಸಂಕೋಚಗಳು ಒಮ್ಮೊಮ್ಮೆ ಒಂದೊಂದು ಆವರಿಸುತ್ತಿದ್ದವು.

ಪ್ರಿಯ ಪಾಠಕರಿಗೆ ನಾವು ಈ ಮೊದಲೇ ಪ್ರಮಥನ ದಾಂಪತ್ಯ ಜೀವನವು ಹೇಗಿತ್ತೆಂಬುದನ್ನು ತಿಳಿಹಿರುವೆವು. ಆದುದರಿಂದ ಅದನ್ನಿಲ್ಲಿ ತಿರುಗಿ ವಿವರಿಸುವ ಅವಶ್ಯಕತೆಯು ಕಾಣುವುದಿಲ್ಲ. ಆದುದರಿಂದಲೇ 'ಪ್ರಮಥನ ಹೇಳಿಕೆಯು ವಿಸ್ತಾರವಾಗಿದ್ದರೂ ನಾವು ಅದರ ಸಾರಾಂಶವನ್ನು ಮಾತ್ರವೇ ಇಲ್ಲಿ ಕೊಟ್ಟಿರುವೆವು. ಪ್ರಮಥನ ಹೇಳಿಕೆಯಲ್ಲಿ ಈ ಕೆಳಗಿನ ಅಂಶಗಳು ಮುಖ್ಯವಾಗಿದ್ದವು.

'ವೀಣೆಯ ಒಪ್ಪಿಗೆಯಿಂದಲೇ ನಾನು ಆಕೆಯನ್ನು ರಿಜಿಸ್ಟ್ರ ಮೂಲಕ ಮದುವೆಯಾಗಿರುವೆನು. ನಾನು ಗಾರ್ಹಸ್ಥ್ಯವನ್ನು ನಡೆಯಿಸಬೇಕೆಂದು ಆಗಲೇ ತಕ್ಕಷ್ಟು ವಿದ್ಯಾವತಿಯಾದ ಆಕೆಯನ್ನು ಮದುವೆಯಾದುದಲ್ಲದೆ ಆಕೆಗೆ ಉಚ್ಚಶಿಕ್ಷಣವನ್ನು ಕೊಡಿಸಿ ಯಾವುದಾದರೂ ಪದವಿಗೆ ಏರಿಸಬೇಕೆಂದಲ್ಲ. ಆದರೂ ಆಕೆಯು ನನ್ನ ಇಚ್ಛೆಗೆ ವಿರುದ್ಧವಾಗಿಯೂ, ದುರ್ಬೋಧನೆಗೆ ಒಳಗಾಗಿಯೂ ನನ್ನನ್ನು ಹಲವು ರೀತಿಯಿಂದ ವಂಚಿಸಿ ತಿರಸ್ಕಸಿದ್ದಾಳೆ. ಸುರೇಶಚಂದ್ರಬಾಬುವು ಆಕೆಯನ್ನು ಕೆಡಿಸಿರುತ್ತಾನೆ. ಡಿಲ್ಲಿಯಲ್ಲಿ ತಿಂಗಳುಗಟ್ಟಲೆ ವೀಣೆಯು ಏಕಾಕಿನಿಯಾಗಿ ಸುರೇಶ ಬಾಬುವಿನೊಡನಿದ್ದಳು. ನಾನು ಆಕೆಯ ತವರುಮನೆಗೆ ಕರೆಯಹೋದಾಗ ಹಲವುಬಾರಿ ತಿರಸ್ಕರಿಸಿದ್ದಳು. ಎಲ್ಲಾದರೂ ಒಮ್ಮೊಮ್ಮೆ ನಮ್ಮಲ್ಲಿಗೆ ಬಂದರೂ ನನ್ನ ಏಕಾಂತದಲ್ಲಿ ಸೇರುತ್ತಿದ್ದಿಲ್ಲ! ಒಮ್ಮೆ ಕಲಿಕತ್ತೆಯಿಂದ ಬರುವಾಗಲೇ ಗರ್ಭವತಿಯಾಗಿದ್ದಳು.'

ಇಷ್ಟಂಶವನ್ನು ಕೇಳಿ ನ್ಯಾಯಾಧೀಶರು ಅಚ್ಚರಿಗೊಂಡು 'ನಿಮ್ಮಲ್ಲಿಗೆ ಬಂದಿದ್ದಾಗ ನೀವು ವೀಣೆಯೊಡನೆ ಒಂದೇ ಕೋಣೆಯಲ್ಲಿ ಮಲಗುತ್ತಿದ್ದಿಲ್ಲವೇ? ಎಂದು ಕೇಳಿದರು.

ಪ್ರಮಥನು 'ಇಲ್ಲ'ವೆಂದನು. ಹಾಗೂ ಮುಂದೆ ಹೇಳತೊಡಗಿದನು. 'ವೀಣೆಯು ಬರುವಾಗಲೇ ಗರ್ಭಿಣಿಯೆಂದು ನನಗೆ ಖಚಿತವಾಗಿತ್ತು. ಆ ಕುರಿತು ಆಕೆಯನ್ನು ನಾನು ತಿರಸ್ಕರಿಸತೊಡಗಿದೆ. ಅದರಿಂದ ಆಕೆಯು ಕಂಗಾಲುಗೊಂಡು ತನ್ನನ್ನು ಒಮ್ಮೆಗೆ ಕ್ಷಮಿಸ ಬೇಕೆಂದೂ ಮುಂದಕ್ಕೆ ಸಚ್ಚರಿತ್ರಳಾಗಿರುವೆನೆಂದೂ ಬೇಡಿಕೊಂಡಳು.

ಕೆಲವು ದಿನಗಳ ಮೇಲೆ ಆಕೆಯನ್ನು ತಂದೆಯು ಬಂದು ಕರಕೊಂಡುಹೋದರು. ೧೩ನೆ ಇಸವಿಯ ಆಗಸ್ಟಿನಲ್ಲಿ ಕಲಿಕತೆಯಲ್ಲೇ ಆಕೆಗೆ ಶಿಶುಜನನವಾಯಿತು. ಮಗು ಈಗಲೂ ಜೀವಿಸಿದೆ. ಅದು ನನ್ನ ಮಗುವಲ್ಲ!

ಇಷ್ಟಾದರೂ ವೀಣೆಯು ಇನ್ನೂ ದಾರಿಗೆ ಬಾರದೆಹೋದಳು. ನನ್ನ ಮಾತನ್ನು ಮರೆತು ಸುರೇಶಬಾಬುವಿನ ಒಡನಾಟದಲ್ಲಿರುವಳು. ಇದೇ ಕಳೆದ ಜೂನ್‌ತಿಂಗಳಲ್ಲಿ ಸುರೇಶ ಬಾಬುವು ವೀಣೆಯೊಡನೆ ದುರಾಚಾರವನ್ನು ನಡೆಯಿಸುತ್ತಿದ್ದುದನ್ನು ನಾನು ಸ್ವತಃ ಕಂಡೆನು. ಈ ಅತ್ಯಾಚಾರವನ್ನು ಹಲವು ಸಾಕ್ಷಿಗಳಿಂದ ಹಾಗೂ ಆಧಾರಪತ್ರಗಳಿಂದ ರುಜುಗೊಳಿಸಲಿರುವೆನು. ಧರ್ಮಾವತಾರರು ಇದರ ವಿಚಾರಮಾಡಿ ನನಗೆ ನ್ಯಾಯವನ್ನು ದಯಪಾಲಿಸಬೇಕಾಗಿ ಪ್ರಾರ್ಥಿಸುತ್ತೇನೆ.'

ಈ ಹೇಳಿಕೆಯನ್ನು ಕೇಳಿ ಕೋರ್ಟಿನಲ್ಲಿ ಎಲ್ಲರೂ ಪಿಸುಮಾತಿಗಾರಂಭಿಸಿದರು. ಅಷ್ಟರಲ್ಲಿ ಪ್ರಮಥನ ಕಡೆಯ ನ್ಯಾಯವಾದಿಗಳಲ್ಲೊಬ್ಬನಾದ ನರೇಂದ್ರವಸುವು 'ಈ ಸಂಗತಿಗೆ ಆಧಾರವಾಗಿ ವೀಣೆಯ ಹಲವು ಪತ್ರಗಳೂ ಇರುತ್ತವೆ' ಎಂದನು.

**ನ್ಯಾಯಾಧೀಶರು**—'ವೀಣೆಯು ಸ್ವತಃ ನ್ಯಾಯಸ್ಥಾನಕ್ಕೆ ಬರುವನಕ ನಾನದನ್ನು ಸ್ವೀಕರಿಸುವುದಿಲ್ಲ'ವೆಂದರು.

ಅದಕ್ಕೆ ಶ್ರೀ|ವಸು—'ಬಹಳವಾಗಿ ತಾವು ನನ್ನೀ ಮೊಕದ್ದಮೆಯ ಕಾಠಿಣ್ಯವನ್ನು ಮನಸ್ಸಿಗೆ ತಗೊಳ್ಳುವುದಿಲ್ಲ. ಭಾರತ (ಹಿಂದೂಸ್ಥಾನ)ದಲ್ಲಿ ಹೆಂಡತಿಯ ಮೇಲೆ ವ್ಯಭಿಚಾರದ ಆರೋಪವು ಸಧಾರಣ ಸಂಗತಿಗಳಲ್ಲಿ ಮಾಡಲ್ಪಡುವುದಿಲ್ಲ,'ವೆಂದನು.

ಮುಂದೊಂದುದಿನ, ಕೋರ್ಟಿಗೆ ಹಾಜರಾಗಬೇಕೆಂದು ಆಜ್ಞೆಯಾದಂತೆ ವೀಣೆಯು ಹಾಜರಾದಳು. ಆದಿನ, ಪ್ರಮಥನೊಡನೆ ಇದ್ದ ಆಕೆಯ ಎರಡು ಪತ್ರಗಳನ್ನು ಆಕೆಗೆ ತೋರಿಸಿ ಆ ಪತ್ರಗಳನ್ನು ಸಾಕ್ಷಿರೂಪದಲ್ಲಿ ಓದಿದರೆ ಆಕ್ಷೇಪವಿದೆಯೇ? ಎಂದು ಕೇಳಿದಾಗ ವೀಣೆಯು- 'ಏನೂ ಇಲ್ಲ'ವೆಂದಳು.

ಆಗ ಮೊಕದ್ದಮೆಗೆ ಸಂಬಂಧಿಸದವರನ್ನೆಲ್ಲಾ ನ್ಯಾಯಸ್ಥಾನದಿಂದ ಹೊರಗೆ ಕಳುಹಿಸ ಲಾಯಿತು. ಅನಂತರ ಸಂಕ್ಷೇಪವಾಗಿ ವೀಣೆಯ ವಿಚಾರಣೆಯಾಯಿತು. ಆಕೆಯ ವಿಚಾರಣೆಯಾದೊಡನೆ ಪೋಲೀಸು ಪಹರೆಯಿಂದ ಆಕೆಯನ್ನು ಬಿಡಾರಕ್ಕೆ ಕಳುಹಿಸಿ ಕೊಟ್ಟರು.

ಅನಂತರ ನರೇಂದ್ರವಸುವು ನ್ಯಾಯಾಧೀಶರನ್ನು ಕುರಿತು ಹೀಗೆಂದನು.

'ಕೆಪ್ಟನ್ ಕೋರರೂ ಇನ್ಸ್‌ಪೆಕ್ಟರರೂ ಒಂದು ಝುಡ್ತಿಯನ್ನು ನಡೆಸಿರುವರು. ಆ ಝುಡ್ತಿಯಲ್ಲಿ ದೊರೆತ ಒಂದು ಪತ್ರದಲ್ಲಿ ತಿಳಿಯುವಂತೆ ಆಪಾದಿತ (ಸುರೇಶಚಂದ್ರ)ನು ಕೆಲ ಸಮಯ ದಿಲ್ಲಿಯಲ್ಲಿ ರಾಜಾಜಯಸಿಂಹ ಚೌಧುರಿಯವರ ಬಂಗಲೆಗಳಿಗೆ ಸೇರಿದ ಒಂದು ಬಂಗಲೆಯಲ್ಲಿ ಬಿಡಾರವಿದ್ದಂತೆಯೂ, ಆಗ ಅಲ್ಲಿನ ಹಲವು ಏಕಾಂತ ವಿಚಾರಗಳನ್ನು ಕಂಡವರಿರುವಂತೆಯೂ ತಿಳಿದುಬರುತ್ತದೆ. ಅಲ್ಲದೆ ಮಿ. ಶಂಸುದ್ದೀನನು ಆಪಾದಿತ ನೊಡನೆಯೇ ಆಗ ದಿಲ್ಲಿಯಲ್ಲಿದ್ದನು. ಶಂಸುದ್ದೀನನು ಇಲ್ಲಿರುತ್ತಿದ್ದರೆ ಆಪಾದಿತನಿಗೂ ಫಿರ್ಯಾದಿಯ ಸ್ತ್ರೀಗೂ ನಡೆದ ವ್ಯವಹಾರಗಳನ್ನು ಹೇಳಬಲ್ಲ.'

ಅಷ್ಟರಲ್ಲಿ ಆಪಾದಿತನ ಕಡೆಯ ನ್ಯಾಯವಾದಿಯಾದ ಅಡ್ವೋಕೇಟ್ ಜನರಲ್ ಅವನೀಕಾಂತ ರೋಯಿಯು ನ್ಯಾಯಾಧೀಶರನ್ನು ಕುರಿತು-

'ಆತನ ಸಾಕ್ಷ್ಯವು ನನಗೆ ಬೇಕಾಗಿಲ್ಲ. ಆತನ ಹೆಸರು ಸಾಕ್ಷಿಪಟ್ಟಿಯಲ್ಲಿ ಇಲ್ಲ' ಎಂದನು.

**ನ್ಯಾಯಾಧೀಶ**— ಅವರನ್ನೇತಕ್ಕೆ ತಡೆಯುತ್ತೀರಿ?

**ರೋಯಿ**—ಆತನಿಲ್ಲಿ ಕಾಣುವುದಿಲ್ಲ. ಅದಕ್ಕಾಗಿ ವಿಚಾರಣೆಯು ಮುಂದು ವರಿಸಲ್ಪಡಲಾಗದೆಂದು.

**ನ್ಯಾಯಾಧೀಶ**—ಚಿಂತೆಯಿಲ್ಲ. ಬೇರೆಷ್ಟೋ ಸಾಕ್ಷಿಗಳು ಉಪಸ್ಥಿತರಾಗಿರುವರು.

ಅನಂತರ ಪ್ರಮಥನ ಕಡೆಯ ಸಾಕ್ಷಿಗಳಲ್ಲೊಬ್ಬನಾದ ಅಜಿಂಖಾನನನ್ನು ಕರೆಯಲು ಆತನು ಈ ರೀತಿ ತನ್ನ ಹೇಳಿಕೆಯನ್ನಿತ್ತನು—

'ನಾನು ಇಸವಿ ೩೦ರ ಮಧ್ಯಕಾಲದಿಂದ ೩೨ರ ವರೆಗೂ ದಿಲ್ಲಿಯ ರಾಜಾ ಜಯಸಿಂಹ ಚೌಧುರಿಯವರ ಮೋಟರಿನ ಚಾಲಕನಾಗಿದ್ದೆ. ೩೧ರಲ್ಲಿ ಸುರೇಶ ಬಾಬುವನ್ನು ನಾನು ದಿಲ್ಲಿಯಲ್ಲಿ ಕಂಡಿದ್ದೆ. ಆತನೊಡನೆ ಒಬ್ಬ ಹೆಂಗಸೂ ಹಲವು ಮಂದಿ ಚಾಕರರೂ ಇದ್ದರು. ಆ ಹೆಂಗುಸು ಆತನ ಹೆಂಡತಿಯೇ ಎಂಬಷ್ಟು ಹತ್ತಿರವಾಗಿದ್ದಳು. ಮತ್ತು ಆತನು ಹೊರಟು ಹೋದಾಗ ಒಡನೆಯೇ ಹೋಗಿದ್ದಳು.

ಸಾಧಾರಣ ಎರಡೂವರೆ ತಿಂಗಳು ಇವರಲ್ಲಿದ್ದರು.'

ಆಗ ನ್ಯಾಯಾಧೀಶರು—ಆಗ ನೀವು ಅವರ ಯಾವ ಯಾವ ವ್ಯವಹಾರವನ್ನು ಕಂಡಿದ್ದೀರಿ?

**ಅಜಿಂಖಾನ್**—ಸಂಜೆಯ ಹೊತ್ತಿಗೆ ತಂಗಾಳಿಗೆ ಮೈಯೊಡ್ಡಿ ಮೇಲು ಮಹಡಿ ಯಲ್ಲಿ ತಿರುಗಾಡುತ್ತಿದ್ದರು. ಹಾಗೂ ಪರಸ್ಪರ ಆಲಿಂಗಿಸಿಕೊಳ್ಳುತಿದ್ದುದನ್ನೂ ಹಲವು ಬಾರಿ ಕಂಡಿದ್ದೆ. ಒಂದು ಬಾರಿ ಅವರು ಹಗಲಲ್ಲೇ ಒಟ್ಟಿಗೆ ಮಲಗಿದ್ದುದನ್ನೂ ಕಂಡಿದ್ದೆ.

**ನ್ಯಾಯಾಧೀಶ**—ಮತ್ತೇನನ್ನು ಕಂಡಿದ್ದೀರಿ?

**ಅಜಿಂಖಾನ್**—ಒಂದು ಬಾರಿ ಆ ಹೆಂಗುಸು ಸುರೇಶನ ಒತ್ತಾಗಿ ಕುಳಿತು ಆತನಿಗೆ ಬಿಸ್ಕತ್ತುಗಳನ್ನು ತಿನ್ನಿಸುತಿದ್ದುದನ್ನೂ ಕಂಡಿದ್ದೆ.

**ನ್ಯಾಯಾಧೀಶ**—ಅವರು ಮಲಗುವ ಕೋಣೆಯನ್ನು ನೀವು ನೋಡಿದ್ದಿರಾ?

**ಆಜಿಂಖಾನ್**—ಅಹುದು. ನಾನೊಮ್ಮೆ ಅವರ ಕೋಣೆಗೆ ಹೋಗಿಯೂ ಇದ್ದೆ.

**ನ್ಯಾಯಾಧೀಶ**—ಕೋಣೆಯಲ್ಲಿ ಎಷ್ಟು ಮಂಚಗಳಿದ್ದುವು?

**ಆಜಿಂಖಾನ್**—ಎರಡು ಮಂಚಗಳು ಒತ್ತೊತ್ತಾಗಿ ಇಡಲ್ಪಟ್ಟಿದ್ದುವು.

**ನ್ಯಾಯಾಧೀಶ**—ನೀವು ಬೇರೆ ಕಡೆಗಳಲ್ಲೂ ಅವರು ಒಟ್ಟಿಗೆ ಮಲಗಿದ್ದುದನ್ನು ಕಂಡಿದ್ದಿರಾ?

**ಆಜಿಂಖಾನ್**—ಅಹುದು. ಒಂದೊಂದು ವೇಳೆ ಅವರು ತಮ್ಮ ಮಂಚಗಳನ್ನು ಹೊರ ಅಂಗಳಕ್ಕೆ ತರುತ್ತಿದ್ದರು. ಅಲ್ಲಿಯೂ ಒಂದೆರಡು ಬಾರಿ ಒಟ್ಟಾಗಿ ಮಲಗಿದ್ದುದನ್ನು ಕಂಡಿದ್ದೆ.

**ನ್ಯಾಯಾಧೀಶ**—ಅವರೊಡನೆ ಬೇರಾರಾದರೂ ಹೆಂಗುಸರಿದ್ದರೊ?

**ಆಜಿಂಖಾನ್**—ಬೇರೆ ಹೆಂಗುಸರಿರಲಿಲ್ಲ.

ಅನಂತರ ಮೂರು ಮಂದಿ ತರುಣಿಯರ ಒಂದು ಸಮೂಹಚಿತ್ರ (ಗ್ರೂಪ್ ಫೋಟೋ)ವನ್ನು ಆಜಿಂಖಾನನಿಗೆ ತೋರಿಸಿ 'ಇದರಲ್ಲಿ ಅಲ್ಲಿದ್ದ ಹೆಂಗುಸಿನ ಭಾವಚಿತ್ರ ವಿದೆಯೆ? ಇದ್ದರೆ ಯಾವುದು?' ಎಂದು ಕೇಳಲಾಯಿತು. ಆಜಿಂಖಾನನು—'ನಡುವೆ ಇರುವುದೇ ನಾನು ದಿಲ್ಲಿಯಲ್ಲಿ ಕಂಡಿದ್ದ ಹೆಂಗುಸು' ಎಂದನು.

ಕೆಪ್ಟನ್ ಕೋರರು ತಾ. ೨೭-೨-'೩೫ರಲ್ಲಿ ವೀಣೆಯ ಕೋಣೆಯನ್ನು ಝಡ್ತಿ ನಡೆಸಿದಾಗ ದೊರೆತ ವಸ್ತುಗಳಲ್ಲಿ ಇದೊಂದು. ನಡುವೆ ಇದ್ದುದೇ ವೀಣೆಯ ಭಾವ ಚಿತ್ರವು.

ಆಜಿಂಖಾನವನ್ನು ಹೊರಗೆ ಕಳುಹಿಸಿ ಪ್ರಫುಲ್ಲ ಸರಕಾರನನ್ನು ಕರೆಯಲಾಯಿತು

## ಹದಿನಾಲ್ಕನೆಯ ಪರಿಚ್ಛೇದ

ಪ್ರಫುಲ್ಲನು ಹೇಳತೊಡಗಿದನು—

'ಮುದ್ದಯಿ (ಪ್ರಮಥನಾಥ) ಯು ನನ್ನ ಚಿಕ್ಕಪ್ಪನಾಗಿರುವನು. ಆತನಿಗೆ ವೀಣೆ ಯೊಡನೆ ವಿವಾಹವಾದಾಗ ನಾನೂ ಅಲ್ಲಿದ್ದೆ. ನನ್ನ ಚಿಕ್ಕಪ್ಪನಿಗೆ ನನ್ನಲ್ಲಿ ಬಹಳ ವಾತ್ಸಲ್ಯವಿದೆ. ನನಗೂ ಆತನಲ್ಲಿ ಹೆಚ್ಚು ಸಲುಗೆಯಿದೆ.'

ಅಷ್ಟರಲ್ಲಿ ನರೇಂದ್ರವಸುವು 'ದಯವಿಟ್ಟು ಈ ಪತ್ರಗಳನ್ನು ಪ್ರಮಥಬಾಬುವು ನಿಮಗೆ ಕೊಟ್ಟರೆಂದು ನಿರ್ಣಯಿಸುವಿರಾ?' ಎಂದು ಕೇಳಿದನು.

**ನ್ಯಾಯಾಧೀಶ**—ಎಂತಹ ಪತ್ರ?

**ವಸು**—ಪ್ರಮಥಬಾಬುಗೆ ವೀಣೆಯೇ ಬರೆದ ಪತ್ರಗಳು.

**ಪ್ರಫುಲ್ಲ**—ನನ್ನ ಚಿಕ್ಕಪ್ಪನು ನನಗೀ ಪತ್ರಗಳನ್ನು ನಕಲು ತೆಗೆಯಲು ಕೊಟ್ಟಿದ್ದನು.

**ನ್ಯಾಯಾಧೀಶ**—ಈ ಪತ್ರಗಳನ್ನು ನಾನು ಒಪ್ಪಲಾರೆ. ಖಾಸಗೀ ಪತ್ರಗಳು ಬರೆದವರ ಅನುಮತಿ ವಿನಾ ಸಾಕ್ಷಿಯಾಗಲು ಅರ್ಹಗಳಲ್ಲ.

**ವಸು**—ಏನು? ನಾನೊಂದು ಉದಾಹರಣೆಯನ್ನು ಕೊಡಲೇ? ಸೆಶ್ಯನ್‌ಜಡ್ಜರು ಪತಿ-ಪತ್ನಿಯರ ರಹಸ್ಯದ ಮಾತುಗಳನ್ನು ಕೋರ್ಟಿನಲ್ಲಿ ಚರ್ಚೆಗೆ ತಂದು ರುಜುಪಡಿಸಲಾಗದೆಂದು ಹೇಳಿದ್ದರೂ ಮೊನ್ನೆ ಹೈಕೋರ್ಟಿನವರು ಅದೇ ಮೊಕದ್ದಮೆಯ ನಿರ್ಣಯವನ್ನೀಯುವಾಗ—ಅಂತಹ ಗುಪ್ತಮಾತುಗಳೂ ಚರ್ಚಿಸಲ್ಪಡಲಡ್ಡಿಯಿಲ್ಲವೆಂದು ಹೇಳಿರುವರು.

**ನ್ಯಾಯಾಧೀಶ**—ನಾನೂ ಪತ್ನಿಯ ಅನುಮತಿ ವಿನಾಹ ಕೂಡದೆಂದುದು.

ಆಗ ಪ್ರಮಥನ ನ್ಯಾಯವಾದಿಯಾದ ದಿನೇಶ ಬೆನರ್ಜಿಯು ನ್ಯಾಯಾಧೀಶರನ್ನು ಕುರಿತು 'ತಾವು ಕ್ರಿ. ಪ್ರೊ. ಕೋಡಿನ ೯೪ ನೋಡಬೇಕು. ವ್ಯಕ್ತಿಗಳು ಸಾಕ್ಷಿಯಾಗುತ್ತಾರೆ. ಪತ್ರಗಳು ಸಾಕ್ಷಿಗಳಲ್ಲ. ಸಾಕ್ಷಿಗಳ ಹೇಳಿಕೆಗೆ ಆಧಾರಗಳಾಗಿ ಗೊತ್ತುಪಡಿಸಲ್ಪಡುತ್ತವೆ. ವೀಣೆಯು ಈ ಪತ್ರಗಳನ್ನು ರುಜುಗೊಳಿಸಬೇಕು.

**ನ್ಯಾಯಾಧೀಶ**—ನನಗೆ ಸಂದೇಹವಿದೆ.

**ರೋಯಿ**—ಇವರೆಲ್ಲಾ, ಯಾರ ಪತ್ರವೋ ಅವರ ಅನುಮತಿ ವಿನಾಹ ಅವುಗಳನ್ನು ಬಹಿರಂಗಪಡಿಸಲಿಚ್ಛಿಸಿರುವರು. ಸ್ತ್ರೀಪುರುಷರ ರಹಸ್ಯಗಳನ್ನು ಬಹಿರಂಗಪಡಿಸಲು ಸರಿಯಲ್ಲ. ವೀಣೆಯ ಯಾವ ಮಾತನ್ನೂ ಹೇಳಲು ಪತಿಗೆ ಅನುಮತಿಯಿಲ್ಲ.

**ನ್ಯಾಯಾಧೀಶ**—ಆಕೆಯ ಅನುಮತಿಯನಕ.

**ರೋಯಿ**—ಸರಿಯಾದ ಮಾತು. ಪತಿಯಾಗಲಿ—ಪತ್ನಿಯಾಗಲಿ ರಹಸ್ಯೋದ್ಘಾಟನೆಯಿಂದ ಸಿಟ್ಟುಗೊಂಡು ಅನರ್ಥವುಂಟಾದಲ್ಲಿ ಅವರಿಗೆ ಕಾನೂನೂ ಹತ್ತಲಾರದು.

**ನ್ಯಾಯಾಧೀಶ**—ಆದರೆ, ಇಲ್ಲಿ ಶೋಧಿಸಲಿಕ್ಕಿರುವುದಾವುದು?

**ರೋಯಿ**—ನೋಡಬೇಕು. ಆ ಪತ್ರಗಳನ್ನು ಬರೇ ನಕಲು ಮಾಡಲಿಕ್ಕಾಗಿಯೇ ಕೊಟ್ಟಿದ್ದಲ್ಲ. ಈ ಪತ್ರಗಳೂ ಒಂದು ಡೈರಿಯೂ ಮೊದಲು ಕೆಪ್ಟನ್ ಕೋರರ ವಶವಿದ್ದವು. ಕೋರರು ಮುದ್ದಯಿಯ ಏಜಂಟರೆಂದರೂ ಅನಬಹುದು.

**ನ್ಯಾಯಾಧೀಶ**—ಸಂದೇಹವಿಲ್ಲ.

**ಬೆನರ್ಜಿ**—ಈ ಪತ್ರಗಳನ್ನು ಕೋರರು ರುಜುಗೊಳಿಸಿ ತರುವಲ್ಲಿ ಮಾತ್ರ. ಅಷ್ಟರನಕ ಅವರು ವಕೀಲರೂ ಅಲ್ಲ, ಏಜಂಟರೂ ಅಲ್ಲ.

**ನ್ಯಾಯಾಧೀಶ**—ರುಜುಗೊಳಿಸಿದರೂ ಅವು ಸಾಕ್ಷಿಗಳಾಗಲಾರವು.

**ರೋಯಿ**—ಇಷ್ಟೇಕೆ? ವೀಣೆಯು ಇಲ್ಲೇ ಇರುವುದರಿಂದ ಈ ಮಾತಿನ ಚರ್ಚೆಯೇಕೆ? ಅವಳನ್ನೇ ಕೇಳಿದರಾಯಿತು.

**ನ್ಯಾಯಾಧೀಶ**—ನಿಜ. ಅವಳನ್ನೇ ಕೇಳುವ.

ವೀಣೆಯನ್ನು ಕರೆದು ಪತ್ರಗಳನ್ನು ಅವಳಿಗೆ ಕೊಡಿಸಿ.

**ನ್ಯಾಯಾಧೀಶ**—ದಯವಿಟ್ಟು ನೀವಿದನ್ನು ಓದಿ ಇವು ಕೋರ್ಟಿನಲ್ಲಿ ಹಾಜರುಪಡಿಸತಕ್ಕವುಗಳೋ ಎಂದು ಹೇಳಿರಿ.

**ವೀಣಾ**—ಒಳ್ಳೆದು. ಅವನ್ನು ಹಾಜರುಪಡಿಸಲು ನನ್ನ ಅಡ್ಡಿಯಿಲ್ಲ.

**ನ್ಯಾಯಾಧೀಶ**—ಧನ್ಯವಾದ.

ಅಷ್ಟರಲ್ಲಿ ನರೇಂದ್ರವಸುವು ವೀಣೆಯನ್ನು ಕುರಿತು 'ನೀವು ಆ ಪತ್ರಗಳನ್ನು ನೋಡಿರುವಿರಾ?' ಎಂದು ಕೇಳಿದನು.

**ನ್ಯಾಯಾಧೀಶ**—ಏನು! ಅವು ಅವರೇ ಬರೆದುವುಗಳು.

**ವಸು**—ಈ ಅವರ ಡೈರಿಯನ್ನೂ ಹಾಜರುಪಡಿಸಲು ಅಡ್ಡಿಯಿಲ್ಲವೆಂದೆಣಿಸುವೆನು.

ಅಷ್ಟರಲ್ಲಿ ವೀಣೆಯು ತನ್ನ ಹೇಳಿಕೆಯನ್ನು ಬಂಗಾಳಿಯಲ್ಲಿ ಹೇಳಿಕೊಳ್ಳಲು ಆಜ್ಞೆಯಾಗಬೇಕೆಂದು ಕೇಳಿಕೊಂಡು ಎಲ್ಲಾ ತನ್ನ ವೃತ್ತಾಂತಗಳನ್ನೂ ಹೇಳಿದಳು. ನ್ಯಾಯಾಧೀಶರು ಎಲ್ಲವನ್ನೂ ಕೇಳಿ ಅವಳ ಪತ್ರಗಳನ್ನೂ ಡೈರಿಯನ್ನೂ ಓದಗೊಟ್ಟರು. ಪೋಲೀಸು ರಕ್ಷಣೆಯಿಂದ ಹೊರ ಅಂಗಳಕ್ಕೆ ಬಂದು ಪತ್ರಗಳೂ ಡೈರಿಯೂ ಓದಲಾದುವು. ಮಿ. ವಸುವಿಗೆ ಮಾತ್ರ ಅವರೊಡನೆ ಬರಲು ಅನುಮತಿಯು ದೊರೆತಿತ್ತು.

ಇದೊಂದು ಅಡ್ಡ ಚರ್ಚೆಯು ಬಂದು ಹೇಳಿಕೆಯನ್ನೀಯಲು ನಿಂತಿದ್ದ ಸಾಕ್ಷೀ ಪ್ರಫುಲ್ಲನು ಇದುವರೆವಿಗೂ ಸುಮ್ಮನಿದ್ದು ಈಗ ಹೇಳತೊಡಗಿದನು.

'ವೀಣೆಯನ್ನು ಕರೆತರಲು ಎಷ್ಟೋ ಬಾರಿ ನಾನು ಹೋಗಿದ್ದೆ. ಆದರೆ, ಆಕೆಯು ಬರಲು ತಿರಸ್ಕರಿಸುತ್ತಿದ್ದಳು. ನಾನು ಹೋದಾಗಲೂ ಆಕೆಯ ವ್ಯವಹಾರಗಳಲ್ಲಿ ದೃಷ್ಟಿಯನ್ನಿಡಬೇಕೆಂದು ನನ್ನ ಚಿಕ್ಕಪ್ಪನು ಹೇಳಿದ್ದನು. ನಾನು ಶನಿ-ರವಿವಾರಗಳಲ್ಲಿ ಅವಳ ಮನೆಗೆ ಹೋಗುತ್ತಿದ್ದೆ. ನಾನು ಆಪಾದಿತನ ಮನೆಯನ್ನೂ ಶೋಧಿಸುತ್ತಿದ್ದೆ. ಒಂದೊಂದು ವೇಳೆ ವೀಣೆಯು ಎಲ್ಲಿಗೆ ಹೋಗಿರುವಳೆಂದು ಯಾರಿಗೂ ತಿಳಿಯುತ್ತಿದ್ದಿಲ್ಲ.'

**ವಸು**—ನೀವು ಎಂದಾದರೂ ಆಕೆಯನ್ನು ಎಲ್ಲಿಗೆ ಹೋಗಿದ್ದುದೆಂದು ಕೇಳಿದ್ದುಂಟೊ? ಅಥವಾ ಆಕೆಯು ಬಡಾಕಾಕಾರವರ ಮನೆಗೆ ಇಲ್ಲವೇ ವಾಚನಾಲಯಗಳಿಗೆ ಹೋಗಿದ್ದೆನೆಂದು ಹೇಳಿದ್ದುಂಟೋ?

**ರೋಯಿ**—ನಾನೀ ಪ್ರಶ್ನೆಗೆ ಅಡ್ಡಿಮಾಡುವೆನು. ಅವಳಿಲ್ಲೇ ಇದ್ದಾಳೆ. • ಅವಳನ್ನೇ ಕೇಳಬಹುದು.

**ವಸು**—ಏನು ನೀವು ಎಂದಾದರೂ ಅವಳ ಮನೆಯ ಮುಂದೆ ಯಾವುದಾದರೂ ಮೋಟರು ನಿತ್ತಿದ್ದುದನ್ನು ಕಂಡಿರುವಿರಾ?

**ಪ್ರಫುಲ್ಲ**—ಅಹುದು. ಅವಳು ಯಾವಾಗಲೂ ಸುರೇಶಬಾಬುಗಳ ಮನೆಗೆ ಹೋಗುವಾಗ ಅವರ ಮೋಟರಿನಲ್ಲೇ ಹೋಗುತ್ತಿದ್ದಳು.

---

## ಹದಿನೈದನೆಯ ಪರಿಚ್ಛೇದ

ಅವಶ್ಯವೆಂದು ಕಂಡುಬಂದ ಸಾಕ್ಷಿಗಳಲ್ಲೆಲ್ಲಾ ಇನ್ನು ಒಬ್ಬನ ವಿಚಾರಣೆಯು ಉಳಿದಿದೆ. ಆದರೆ, ಆತನ ಸಾಕ್ಷ್ಯವು ತೀರ ಮಹತ್ವದ್ದಾಗಿತ್ತು. ಆತನನ್ನು ವಾಠಕರು ಬಲ್ಲರು. ಅಂದೊಂದು ದಿನ ನಮ್ಮ ಪ್ರಮಥನೊಡನೆ ಒಂದು ಪ್ರತ್ಯಕ್ಷ ಘಟನೆಯನ್ನು

ಕಂಡು ಕೋಪ-ತಾಪಗಳಿಂದ ಬೆಂದವನವನು. ವಿನೋದವಿಹಾರೀ ವಿಶ್ವಾಸನನ್ನು ವಾಚಕರು ಇಷ್ಟರಲ್ಲೇ ಮರೆತಿರಲಿಕ್ಕಿಲ್ಲ. ತನ್ನ ಆಹ್ವಾನವನ್ನೇ ನಿರೀಕ್ಷಿಸುತ್ತಿದ್ದ ವಿನೋದನು ಕೂಡಲೇ ತನ್ನ ಆನಸದಲ್ಲಿ ಬಂದು ನಿಂತು ತುಸು ಉತ್ತೇಜಿತನಾಗಿದ್ದಂತೆ ಹೇಳತೊಡಗಿದನು.

'ನಾನು ನಡಿಯಾ ಜಿಲ್ಲೆಯ ಮೋಹರಪುರದ ನಿಗಮಾನಂದ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿರುವೆನು. ಮುದ್ದಯಿಯು ನನಗೆ ಭಾವನಾಗಬೇಕು. ಕಳೆದ ಜೂನ್ ೧೭ಕ್ಕೆ ನಾನು ಕಲಿಕತ್ತೆಗೆ ಬಂದಿದ್ದೆ. ನಾನು ಬಂಗಾಳ ವಿಮಾ ಕಂಪೆನಿಯ ಏಜನ್ಸಿಯನ್ನು ತೆಗೆದುಕೊಳ್ಳಬೇಕೆಂದಿದ್ದೆ. ಆ ವಿಚಾರವನ್ನು ಪ್ರಮಥಬಾಬುವೊಡನೆ ಪ್ರಸ್ತಾವಿಸಿದೆ. ಅನಂತರ ನಾವಿಬ್ಬರೂ ಅಪರಾಹ್ನ ೨ ಘಂಟೆಗೆ ಆ ಕಂಪೆನಿಯ ವ್ಯವಹಾರಮಂದಿರ (ಆಫೀಸ್)ಕ್ಕೆ ಹೋದೆವು. ನನ್ನನ್ನು ಕೆಳಗಿನಿಂದ ಬಿಟ್ಟು ಪ್ರಮಥಬಾಬುವು ಸುರೇಶ ಬಾಬುವೊಡನೆ ಮಾತಾಡಿಬರುವೆನೆಂದು ಹೋದನು. ನಾನು ಆ ಹಿಂದೆ ಸುರೇಶ ಬಾಬುವನ್ನು ಕಂಡಿದ್ದಿಲ್ಲ

ತುಸು ಹೊತ್ತಿನಲ್ಲಿ ಪ್ರಮಥಬಾಬುವು ಬಂದು ಒಂದು ಘಂಟೆ ನಿಲ್ಲಬೇಕಾಗಿದೆಯೆಂದು ಹೇಳಿ ತಿರುಗಿ ಮೇಲೆ ಹೋದ. ಆದರೆ, ಕೂಡಲೇ ಬಂದು ನನ್ನನ್ನು ಕರೆದ. ಅವನೊಡನೆ ನಾನೂ ಮಹಡಿಯನ್ನು ಹತ್ತಿ ಹೋದೆ.

ಕೊನೆಯ ಕೊಠಡಿಯೊಂದರ ಹತ್ತಿರ ಹೋದೆವು. ಅದರ ಎಲ್ಲಾ ಬಾಗಿಲು ಕಿಟಕಿಗಳೂ ಮುಚ್ಚಲಾಗಿದ್ದವು. ನಾವು ಪರೀಕ್ಷಾರ್ಥವಾಗಿ ಒಂದು ಬಾಗಿಲನ್ನು ನೂಕುವಾಗ ಅದು ತೆರೆದುಹೋಯಿತು. ಮುಂದೆ ನೋಡುವಾಗ ವೀಣೆಯೂ ಸುರೇಶನೂ ಒಂದೇ ಮಂಚದಲ್ಲಿ ಮಲಗಿದ್ದರು. ಸುರೇಶನು ನಮ್ಮನ್ನು ಕಂಡು ಚಕಿತನಾಗಿ ಕೂಡಲೇ ಎದ್ದು ಹಿಂದಿನೊಂದು ಕೋಣೆಗೆ ಹೊರಟು ಹೋದ. ವೀಣೆಯು ವಸ್ತ್ರವನ್ನು ಸರಿಮಾಡಿಕೊಳ್ಳುತ್ತಾ ಸಿಡಿದೆದ್ದು ಪ್ರಮಥನೊಡನೆ ಜಗಳಕ್ಕೆ ತೊಡಗಿದಳು. ಮತ್ತು ಅಲ್ಲಿಂದ ಕೂಡಲೇ ಹೊರಟುಹೋಗಬೇಕೆಂದಳು. ಪ್ರಮಥನು ಆಕೆಗೆ 'ಜಾಗ್ರತೆ! ಸೀಳಿಬಿಡುತ್ತೇನೆಂ'ದು ಮೈಮೇಲೆ ಏರಿ ಹೋಗುವುದರಲ್ಲಿರುವಾಗ ನಾನು ಬಲವಂತ ಮಾಡಿ ಆತನನ್ನು ಕೊಠಡಿಯಿಂದ ಹೊರಗೆಳೆತಂದೆ. ಅನಂತರ, ನಾವಿಬ್ಬರೂ ಅಲ್ಲಿಂದ ಹೊರಟು ಬಂದೆವು'.

ನ್ಯಾಯಸ್ಥಾನದಲ್ಲಿ ಪಿಸುಮಾತಿಗಾರಂಭವಾಯಿತು. ನ್ಯಾಯಾಧೀಶರು ಎಲ್ಲವನ್ನೂ ಕೇಳಿ ಛಾರ್ಜನ್ನು ಬರೆಯಲುಪಕ್ರಮಿಸಿದರು.

ಪ್ರಮಥನ ವಕೀಲಾದ ದಿನೇಶ 'ಬೆನರ್ಜಿಯು ಆಪಾದಿತನ ಮೇಲೆ ಇನ್ನೊಂದು ವ್ಯಭಿಚಾರದ ಆರೋಪವೂ ಇದೆ'ಯೆಂದನು.

**ನ್ಯಾಯಾಧೀಶ**—ಅದೇನೇ ಇರಲಿ. ಜೂನ್ ೧೭ರ ಘಟನೆಯಿಂದಾಗಿ ನಾನು ಈ ಮೊದಲೇ ಛಾರ್ಜು ಮಾಡಿರುವೆನು.

**ಬೆನರ್ಜಿ**—ಬೇರೊಂದು ಆರೋಪದ ಕುರಿತು?

**ರೋಯಿ**—ಬೇರೊಂದೇನು? ಇಲ್ಲಿ ಸಾಕ್ಷಿಗಳು ಹೇಳಿರುವುದಕ್ಕಿಂತ ಬೇರೇನು? ಮುದ್ದಯಿಯೂ ಜೂನ್ ೧೭ನೆಯ ಘಟನೆಯಿಂದಲೇ ವ್ಯಭಿಚಾರದ ಆರೋಪ ಮಾಡಿರುವನು. ಇನ್ನೇನು?

**ನ್ಯಾಯಾಧೀಶ**—ನಾನು ಜೂನ್ ೧೭ರ ಘಟನೆಯಿಂದಲೇ ಛಾರ್ಜುಮಾಡಿದ್ದೇನೆ. ಆದರೆ, ೩೩ನೇ ಅಕ್ಟೋಬರ್ ಮತ್ತು ೩೪ನೇ ಜೂನ್ ೧೬ ಈ ನಡುವೆಯೂ ವ್ಯಭಿಚಾರ ನಡೆದಿದೆ.

**ರೋಯಿ**—ನಾನು ಚರ್ಚಿಸಬೇಕಾಗಿದೆ. ಈ ಆರೋಪವು ನಿರಾಧಾರವಾದುದು. ನೀವು ನನ್ನ ಮಾತನ್ನು ಮನ್ನಿಸುವುದಿಲ್ಲ! ಯಾವ ಆರೋಪವನ್ನೂ ಮಾಡಲಾಗದು. ನಾವಿರುವುದೇ ಸಾಕ್ಷಿಗಾರರ ಮಾತುಗಳನ್ನು ಚರ್ಚಿಸುವುದಕ್ಕೆ

**ನ್ಯಾಯಾಧೀಶ**—ಛಾರ್ಜು ಸರಿಯೋ ಅಲ್ಲವೋ ಎಂದು ಹಿಂದಿನಿಂದ ತಿಳಿದೀತು.

**ರೋಯಿ**—ಕಲಿಕತ್ತೆಯ ಘಟನೆಯಿಂದಲೇ ಆಗುವಂತಿಲ್ಲ. ಆರೋಪವು ಬೇರೆ ಬೇರೆ ತಾರೀಕುಗಳಲ್ಲಿದೆ, ಜೂನ್ ೧೭ಕ್ಕೆ ಮೊದಲೇ ಕಲಿಕತ್ತೆಯಲ್ಲಿ ವ್ಯಭಿಚಾರವು ನಡೆದಿದೆಯೆನ್ನುವ ಸಾಕ್ಷಿಗಳು ನಿಮ್ಮಲ್ಲಿರುವರೇ?

**ನ್ಯಾಯಾಧೀಶ**—ಅಹುದು. ಈ ಮೊದಲು ಬಹಳಾವರ್ತಿ ವ್ಯಭಿಚಾರವು ನಡೆದಿದೆಯೆಂದು ಮುದ್ದಯಿಯು ಹೇಳಿದ್ದಾನೆ.

**ರೋಯಿ**—ಮುದ್ದಯಿಯು ನಿರ್ಧಾರವಾಗಿ ಹೇಳಲಿಲ್ಲ.

**ಬೆನರ್ಜಿ**—ಇಲ್ಲ. ನಿರ್ಧರಿಸಿಯೇ ಹೇಳಿದ್ದಾನೆ.

**ನ್ಯಾಯಾಧೀಶ**—ಅವನು ಹಾಗೆ ಹೇಳಿದ್ದುದರ ಆಧಾರದಿಂದಲೇ ಈಗ ಛಾರ್ಜು ಮಾಡಲಾಗಿದೆ.

ಹೀಗೆಂದು ನ್ಯಾಯಾಧೀಶರು ಆಪಾದಿತ ಸುರೇಶ ಚಂದ್ರನನ್ನು ಕುರಿತು 'ನೀವು, ೩೩ನೇ ಅಕ್ಟೋಬರ್ ಮತ್ತು ೩೪ನೇ ಜೂನ್ ೧೭ರ ಈ ಅವಧಿಯಲ್ಲಿ ಕಲಿಕತ್ತೆಯಲ್ಲಿ, ವೀಣೆಯೊಡನೆ ವ್ಯಭಿಚಾರವನ್ನು ನಡೆಸಿರುವಿರಿ' ಎಂದರು.

**ಸುರೇಶಚಂದ್ರ**—ಇದು ಸರ್ವಥಾ ಸುಳ್ಳು ಮಾತು.

**ರೋಯಿ**—ನನ್ನ ವಿರೋಧವಿದ್ದರೂ ತಾವು ಛಾರ್ಜು ಮಾಡುವಲ್ಲಿ ಅಮಾನ್ಯ ರಾಗುತ್ತೀರಿ.

ನ್ಯಾಯಸ್ಥಾನವು ಒಮ್ಮೆ ಎಲ್ಲಾ ಶಾಂತವಾಯಿತು. ಸುರೇಶಚಂದ್ರನಂತಹ ಗೌರವದ ವ್ಯಕ್ತಿಯನ್ನು ಅಪರಾಧಿಯೆಂದು ಬರೆಯುವುದೆಷ್ಟು ಕಷ್ಟವೋ ಆದಕ್ಕೂ ಹೆಚ್ಚಿನ ಕಷ್ಟ ಆತನನ್ನು ಕೋರ್ಟಿನಲ್ಲಿ ನಿಲ್ಲಿಸಿಡಲಿಕ್ಕೆ. ಛಾರ್ಜು ಆದರೂ ಕೂಡಲೇ ಸುರೇಶನನ್ನು ಮಿ. ರೋಯಿಗಳ ಮಗ್ಗುಲಲ್ಲಿ ಕುಳಿತುಕೊಳ್ಳಲು ಅನುಮತಿಯೀಯಲಾಯಿತು.

ಅನಂತರ ಪ್ರಮಥನಾಥನೊಡನೆ ಚರ್ಚೆಗೆ (ಅಡ್ಡವಿಚಾರ) ಮೊದಲಾಯಿತು.

## ಹದಿನಾರನೆಯ ಪರಿಚ್ಛೇದ

**ರೋಯಿ**—ನೀವು ನಿಮ್ಮ ಲಿಖಿತ ಉದಾಹರಣೆಯನ್ನು ಚೆನ್ನಾಗಿ ನೋಡಿರುವಿರಾ?

**ಪ್ರಮಥ**—ಅಹುದು

**ರೋಯಿ**—ಅದರಲ್ಲೇನಾದರೂ ತಿದ್ದುಪಡಿಯಿದೆಯೇ?

**ಪ್ರಮಥ**—ನನ್ನ ಹೇಳಿಕೆಯು ಸರಿಯಾಗಿಯೇ ಇದೆ.

**ರೋಯಿ**—ನಿಮ್ಮ ಅನುಮತಿಯಿಲ್ಲದೆ ನಿಮ್ಮ ಹೆಂಡತಿಯು ಆಪಾದಿತನೊಡನೆ ದಿಲ್ಲಿಗೆ ಹೋಗಿದ್ದಳೆಂದು ಬರೆದಿದ್ದೀರಾ?

**ಪ್ರಮಥ**—ಆಪಾದಿತನೊಡನೆ ದಿಲ್ಲಿಗೆ ಅವಳು ಒಬ್ಬಂಟಿಗಳಾಗಿ ಹೋಗುತ್ತಾಳೆ ಎಂಬುದೇ ನನಗೆ ತಿಳಿಯಲಿಲ್ಲ.

**ರೋಯಿ**—ನಿಮ್ಮ ಪತ್ನಿಯ ಹೇಳಿಕೆಯಲ್ಲಿ ದಿಲ್ಲಿಗೆ ಹೋಗಲು ಅನುಮತಿಯನ್ನು ತಂತಿಯ ಮೂಲಕ ನೀವು ನಿಮ್ಮ ಮಾವನಿಗೆ ಕಳುಹಿಸಿದ್ದೀರೆಂದು ಹೇಳಿದುದನ್ನು ಕೇಳಿಲ್ಲವೇ?

**ಪ್ರಮಥ**—ಅದು ನಿಜವಲ್ಲ.

**ರೋಯಿ**—ಯಾವ ತಂತಿಯನ್ನೂ ಕಳುಹಿಸಿಲ್ಲವೇ?

**ಪ್ರಮಥ**—ಉಂಟು. ಆದರೆ, ಅವರೊಡನೆ ನನ್ನ ಅತ್ತೆ ಮೊದಲಾದವರು ಹೋಗುತ್ತಾರೆಂದೆಣಿಸಿ.

**ರೋಯಿ**—ಅಂತೂ ನೀವು ದಿಲ್ಲಿಗೆ ಹೋಗುತ್ತಾಳೆಂದು ತಿಳಿದೂ ಅವಳನ್ನಲ್ಲೇ ಬಿಟ್ಟಿರಿ.

**ಪ್ರಮಥ**—ಇಲ್ಲ. ಅಲ್ಲಿರಲೂ ನನಗೆ ಸಮ್ಮತಿಯಿದ್ದಿಲ್ಲ.

**ರೋಯಿ**—ನಿಮಗೆ ನೆನಪಿದೆಯೇ ನಿಮ್ಮ ಮಾವನಿಗೊಂದು ಪತ್ರವನ್ನು ಬರೆದುದು.

**ಪ್ರಮಥ**—ಇರಬಹುದು.

**ರೋಯಿ**—ಸುರೇಶಬಾಬುವಿನ ಮುಖಾಂತರ ಒಂದು ಕೆಲಸವನ್ನು ಕೊಡಿಸಬೇಕೆಂದು ಮಾವನಿಗೆ ಬರೆದಿದ್ದೀರಾ?

**ಪ್ರಮಥ**—ಇಲ್ಲ.

**ರೋಯಿ**—ಒಳ್ಳೇದು. ನಿಮ್ಮ ಜಾತಿಯಾವುದು?

**ಪ್ರಮಥ**—ಅದರಿಂದ ಯಾವ ಸಂಬಂಧವೂ ಇಲ್ಲ. ನಾನು ಬ್ರಹ್ಮೋ ಆಗಿದ್ದೇನೆ

**ನ್ಯಾಯಾಧೀಶ**—ಬ್ರಹ್ಮೋ ಯಾವ ಜಾತಿಯೂ ಅಲ್ಲ.

**ರೋಯಿ**—ನಿಮ್ಮ ತಾಯಿಯೂ ಬ್ರಹ್ಮೋವೋ?

**ಪ್ರಮಥ**—ಅಲ್ಲ. ಅವರು ಹಿಂದು.

**ರೋಯಿ**—ನಿಮ್ಮ ಹೆಂಡತಿಯು ಕಾಯಸ್ಥಳಾಗಿದ್ದಾಳೆ.

**ಪ್ರಮಥ**—ನನಗೆ ಗೊತ್ತಿಲ್ಲ.

**ನ್ಯಾಯಾಧೀಶ**—ನಿಮಗೆ ನಿಮ್ಮ ಹೆಂಡತಿಯ ಜಾತಿಯು ಗೊತ್ತಿಲ್ಲವೇ?

**ಪ್ರಮಥ**—ಇಲ್ಲ. ನನಗೆ ಗೊತ್ತಿಲ್ಲ.

**ರೋಯಿ**—ನಿಮಗೆ ಸುರೇಶಬಾಬುವಿನ ಜಾತಿಯು ಗೊತ್ತಿದೆಯೇ? ಅವರು ಕಾಯಸ್ಥರಲ್ಲವೇ?

**ಪ್ರಮಥ**—ಅಹುದು. ಕೇಳಿದ್ದೆ.

**ರೋಯಿ**—ನಿಮ್ಮ ತಂಗಿಯರ ಜಾತಿಗಳನ್ನು ಬಲ್ಲಿರಾ?

**ಪ್ರಮಥ**—ಕೆಲವರು ಹಿಂದುಗಳು. ಕೆಲವರು ಬ್ರಹ್ಮೋಗಳು.

**ರೋಯಿ**—ನಿಮಗೆಷ್ಟು ಮಂದಿ ತಂಗಿಯರು?

**ಪ್ರಮಥ**—ನಾಲ್ಕು ಮಂದಿ.

**ರೋಯಿ**—ನಿಮ್ಮ ತಂದೆಯವರ ಹೆಸರೇನು?

**ಪ್ರಮಥ**—ರಾಮಸಾಗರ ಸರಕಾರ,

**ರೋಯಿ**—ದಿಲ್ಲಿಯಿಂದ ಬಂದ ಮೇಲೆ ವೀಣೆಯು ಕೃಷ್ಣನಗರದಲ್ಲಿ ಎರಡು ತಿಂಗಳಿದ್ದಳೋ?

**ಪ್ರಮಥ**—ಅಹುದು.

**ರೋಯಿ**—ಈ ಪತ್ರವನ್ನು ನೋಡಿರಿ. ಕೃಷ್ಣನಗರದಿಂದ ತಾರೀಕು ೧-೬-೩೧ ರಲ್ಲಿ ನಿಮ್ಮ ಮಾವನಿಗೆ ಬರೆದುದು. ಇದರಲ್ಲ ಪ್ರತಿ ದಿನವೂ ವೀಣೆಗೆ ಜ್ವರವು ಬರುತ್ತಿದೆ. ರಾತ್ರಿಗಂತೂ ಜೋರಾಗುತ್ತದೆಂದು ಬರೆದಿದ್ದೀರಿ. ಇರಲಿ. ನಿಮಗೆ ಮಗುವು ಹುಟ್ಟಿದಾಗ ಮಗು-ಬಾಣಂತಿಯರ ಯೋಗಕ್ಷೇಮವನ್ನು ನೀವು ವಿಚಾರಿಸುತ್ತಿದ್ದಿರಾ?

**ಪ್ರಮಥ**—ಇಲ್ಲ. ಹೆರಿಗೆಯ ಖರ್ಚನ್ನೂ ನಾನು ಕಳುಹಿಸಲ್ಲ.

**ರೋಯಿ**—ಖಂಡಿತಯಿಲ್ಲವೇ?

**ಪ್ರಮಥ**—ಮಾವನವರು ಸ್ವಲ್ಪ ರೂಪಾಯಿಗಳನ್ನು ತರಿಸಿಕೊಂಡಿದ್ದರು. ಅದು ಆಸ್ಪತ್ರೆಯ ಖರ್ಚಿಗೋ ಇನ್ನಾವುದಕ್ಕೋ ನನಗರಿಯದು.

**ರೋಯಿ**—ನೀವು ಯಾರಾರಿಗೆ ಎಷ್ಟು ರೂಪಾಯಿಗಳನ್ನು ಕಳುಹಿಸಿದ್ದಿರಿ?

**ಪ್ರಮಥ**—೩೩ನೆಯ ಜುಲಾಯಿಯಲ್ಲಿ ವೀಣೆಗೆ ೨೫ ರೂಪಾಯಿಗಳನ್ನು ಕಳುಹಿಸಿದ್ದೆ. ಮಾವನಿಗೆ ಮೊದಲು ೨೫, ಅನಂತರ ೪೫೦ರ ವರೆಗೆ ಕಳುಹಿಸಿದ್ದೆ.

ಅಷ್ಟರಲ್ಲಿ ನ್ಯಾಯಾಧೀಶರು 'ನಿಮ್ಮ ಮಾವ ಏತಕ್ಕೆ ರೂಪಾಯಿಗಳನ್ನು ತರಿಸಿಕೊಂಡರು?' ಎಂದು ಕೇಳಿದರು.

**ಪ್ರಮಥ**—ಮಗು ಹುಟ್ಟಿದಾಗ ಹೆಂಡತಿಯ ಖರ್ಚಿಗೆಂದು.

**ರೋಯಿ**—ಇಷ್ಟು ಬೇಗನೇ ಉತ್ತರವನ್ನು ಹೊರಡಿಸಿದ್ದಕ್ಕೆ ಧನ್ಯವಾದ. ಇರಲಿ. ನೀವು ೩೩ನೇ ಅಗೋಸ್ತು ತಿಂಗಳಲ್ಲಿ ಕಲಿಕತ್ತೆಯಲ್ಲಿದ್ದಿರಾ?

**ಪ್ರಮಥ**—ಇಲ್ಲ. ನಾನು ಫೇನಿಯಲ್ಲಿದ್ದೆ.

**ರೋಯಿ**—ಸರಿ. ಅದೇ ನೋಡಿರಿ. ಈ ಪತ್ರದಲ್ಲಿ ಆಸ್ಪತ್ರೆಯ ಖರ್ಚಿಗೆ

ಎರಡು ಮೂರು ದಿನಗಳೊಳಗೆ ರೂಪಾಯಿಗಳನ್ನು ಕಳುಹಿಸುವುದಾಗಿ ನಿಮ್ಮ ಮಾವನಿಗೆ ಬರೆದಿದ್ದೀರಿ. ಇರಲಿ, ಈ ಅಗೋಸ್ತು ೧೪ರ ಪತ್ರವು ನೀವು ಬರೆದುದೋ?

**ಪ್ರಮಥ**—ಅಹುದು.

**ರೋಯಿ**—ನೋಡಿರಿ ನಿಮ್ಮ ಹೆಂಡತಿ-ಮಕ್ಕಳು ಸೌಖ್ಯವಾಗಿದ್ದುದಕ್ಕೆ ಸಂತೋಷ ಪಡುತ್ತೆನೆಂದು ಬರೆದಿದ್ದೀರಿ. ನಿಮಗೆ ಮಗು ಹುಟ್ಟಿದುದಕ್ಕೆ ಸಂತೋಷಪಡುತ್ತೇನೆಂದು ನೀವು ಬರೆದಿಲ್ಲವೇ?

**ಪ್ರಮಥ**—ಅಹುದು.

**ರೋಯಿ**—ನಿವೀಗಲೂ ಮಗು ನಿಮ್ಮದಲ್ಲವೆನ್ನುತ್ತೀರಾ?

**ಪ್ರಮಥ**—ನಾನದರ ಕಾರಣವನ್ನು ಮುಂದೆ ಹೇಳುತ್ತೇನೆ.

**ನ್ಯಾಯಾಧೀಶ**—ದಯವಿಟ್ಟು ಈಗಲೇ ಹೇಳಿರಿ. ನೀವೇನು ಬೇರೊಬ್ಬನನ್ನು ಮಗುವಿನ ತಂದೆಯೆನಲು ಹೊರಟಿದ್ದೀರಾ?

**ಪ್ರಮಥ**—ನನ್ನ ಪತ್ನಿಯು ಮುಂದೆ ಸಚ್ಚರಿತ್ರಳಾಗಿರುವೆನೆಂದು ಹೇಳಿದ್ದರಿಂದ ನಾನು ತಿರಸ್ಕರಿಸದೆ ಸುಮ್ಮನಿದ್ದೆ.

**ರೋಯಿ**—ನೋಡಿರಿ. ಮಗುವಿಗೆ ಯಾವ ತೊಂದರೆಯೂ ಬಾರದಿರಲಿ ಎಂದು ಬರೆದಿಲ್ಲವೇ? ವೀಣೆಗೆ ನೀವು, ನೋಹು ನಿನಗೂ ಮಗುವಿಗೂ ಥಂಡಿಯಾಗದೆ ಎಂದೂ ಬರೆದಿರುವಿರಲ್ಲ! ಹೆಂಡತಿ ಮಕ್ಕಳಲ್ಲಿ ತಿರುಗಿ ಪ್ರೇಮವನ್ನು ತೋರಿಸುತ್ತಿದ್ದಿರಿ!

**ಪ್ರಮಥ**—ಅದು ನನ್ನ ಮಗುವಲ್ಲ. ನಾನು ತಿಳಿದೂ ಸುಮ್ಮನಿದ್ದೆ. ಈ ವಿಚಾರವನ್ನು ಅತ್ತೆ-ಮಾವಂದಿರಲ್ಲೂ ತಿಳುಹಿಸಲಿಲ್ಲ.

**ರೋಯಿ**—ಮಗು ಹುಟ್ಟಿದ ಮೇಲೆಯೇ ಅದು ಸುರೇಶಬಾಬುವಿನದ್ದೆಂದು ತಿಳಿಯಿತೇನೊ? ಅಲ್ಲದೆ, ನೀವವರಿಂದ ನೌಕರಿಯನ್ನು ಸಹ ಕೇಳಿದ್ದೀರಿ!

**ಪ್ರಮಥ**—ಅದೆಲ್ಲಾ ನನ್ನ ಸ್ವಾರ್ಥದ ಮಾತಾಗಿದೆ.

**ನ್ಯಾಯಾಧೀಶ**—ಏನು? ಆ ಗೃಹಸ್ಥರು ನಿಮ್ಮ ಹೆಂಡತಿಯೊಡನೆ ವ್ಯಭಿಚಾರ ಮಾಡಿದರೆಂದೂ ಮಗುವಿನ ತಂದೆ ಅವರೇ ಎಂದೂ ಈಗಲೂ ಹೇಳುತ್ತಿದ್ದು ಇವರೊಡನೆ ಮತ್ತೆ ನೌಕರಿಯನ್ನು ಕೇಳಿದ್ದೀರಾ?

**ಪ್ರಮಥ**—ನನ್ನ ಸ್ವಾರ್ಥಕ್ಕಾಗಿ.

**ನ್ಯಾಯಾಧೀಶ**—ಏನು, ಕೆಲಸವನ್ನು ಕೊಡಿಸಬೇಕೆಂದು ನಿಮ್ಮ ಪತ್ನಿಯನ್ನು ಅವರಲ್ಲಿಗೆ ವೇಶ್ಯೆಯನ್ನಾಗಿ ಮಾಡಿ ಕಳುಹಿಸಿದ್ದೀರಾ?

**ಪ್ರಮಥ**—ಪತ್ನಿಯು ಸಚ್ಚರಿತಳಾಗಿರುವೆನೆಂದು ನಂಬಿಸಿದ್ದಳು.

**ರೋಯಿ**—ನೋಡಿರಿ, ನಿಮ್ಮ ಹಲವು ಪತ್ರಗಳಿವೆ. ನೀವು ಮಗುವನ್ನು ವಿಚಾರಿಸುತಿದ್ದಿರಿ. ಅದನ್ನು ಪ್ರೀತಿಸುತಿದ್ದಿರಿ.

**ಪ್ರಮಥ**—ಒಂದು ನಿರಪರಾಧಿ ಮಗುವಿನಲ್ಲಿ ದಯೆಯುಂಟಾಗಿತ್ತು. ನಾನು ಮಗುವಿಗೆ 'ಜಯಂತಕುಮಾರ'ನೆಂದು ಹೆಸರಿಟ್ಟಿದ್ದೆ. ಅದಕ್ಕೆ ತಾತ್ಪರ್ಯವಿದೆ.

**ರೋಯಿ**—ನೀವಾವ ಹೆಸರನ್ನಾದರೂ ಇಡಲೊಲ್ಲಿರೇಕೆ? ಅಂತೂ ಮಗು ಬೇರೊಬ್ಬರದೆಂದೇ ಈಗಲೂ ಹೇಳುವಿರಾ?

**ಪ್ರಮಥ**—ಅಹುದು.

**ನ್ಯಾಯಾಧೀಶ**—ಈ ಮಾತನ್ನಿಲ್ಲಿಗೆ ಬಿಟ್ಟುಬಿಡಿರಿ.

**ರೋಯಿ**—ನೀವು ವೀಣೆಗೆ ಬರೆದೊಂದು ಪತ್ರದಲ್ಲಿ ಮಗುವಿನ ಕ್ಷೇಮವಿಚಾರ ಮಾಡಿ ನಿಮ್ಮ ಪ್ರೇಮ ಮತ್ತು ಚುಂಬನಗಳನ್ನು ಸ್ವೀಕಾರಮಾಡಬೇಕೆಂದು ಬರೆದಿಲ್ಲವೇ?

**ಪ್ರಮಥ**—ನಾನು 'ನಿನ್ನ ಮಗು' ಎಂದು ಹೇಳಿದ್ದೆ.

**ರೋಯಿ**—ನೀವೊಂದು ಪತ್ರದಲ್ಲಿ ನೀನು ಹೋದಂದಿನಿಂದ ನನಗೆ ಶಾಂತಿಯಿಲ್ಲ. ನಿನ್ನ ಹೊರತು ಒಂದು ದಿನವೂ ಹೋಗುವುದಿಲ್ಲವೆಂದು ಬರೆದಿಲ್ಲವೇ? ನಿಮ್ಮೊಳಗಾಗ ಪ್ರೇಮಪೂರ್ಣ ಸಂಬಂಧವಿದ್ದಿಲ್ಲವೇ?

**ಪ್ರಮಥ**—ಮಿತ್ರಭಾವನೆಯಿತ್ತು.

**ರೋಯಿ**—ನೀವೊಂದು ಪತ್ರದಲ್ಲಿ- ಅವಳು ಒಂದು ಘಂಟೆ ಹೊತ್ತು ನಿಮ್ಮ ಮಗ್ಗುಲಲ್ಲಿದ್ದಳಾದರೂ ನಿಮ್ಮೊಡನೆಯೇ ಇದ್ದಂತೆ ತೋರುತ್ತಿದೆಯೆಂದು ಬರೆದಿಲ್ಲವೇ?

**ಪ್ರಮಥ**—ಆದರೆ, ನಾನು ಅವಳೊಡನೆ ಪ್ರಣಯವನ್ನು ಬೆಳಸಲಿಲ್ಲ.

**ನ್ಯಾಯಾಧೀಶ**—ಆದರೆ, ನಿನ್ನೆ ದಿನ ನೀವು ಅವಳು ಎಂದೂ ನಿಮ್ಮ ಮಗ್ಗುಲಲ್ಲಿ ಮಲಗಿಲ್ಲವೆಂದು ಹೇಳಿದ್ದೀರಲ್ಲ!

**ರೋಯಿ**—ಏನು, ನೀವು ಕೋರ್ಟಿನಲ್ಲಿ ಸುಳ್ಳನ್ನು ಹೇಳಲು ಹೆದರುವುದಿಲ್ಲವೇ? ನೀವೊಂದು ಪತ್ರದಲ್ಲಿ ವೀಣೆಗೆ ನಿನಗೊಂದು ಒಳ್ಳೇ ಮಗುವನ್ನು ಕೊಟ್ಟದ್ದಕ್ಕಾಗಿ ನಿತ್ಯವೂ ಈಶ್ವರನನ್ನು ಪ್ರಾರ್ಥಿಸೆಂದು ಬರೆದಿಲ್ಲವೇ?

**ನ್ಯಾಯಾಧೀಶ**—ಪರಪುರುಷರಿಂದ ಮಗುವಾದುದಕ್ಕಾಗಿಯೇ ನೀವು ನಿಮ್ಮ ಪತ್ನಿಗೆ ದೇವರ ಪ್ರಾರ್ಥನೆ ಮಾಡಹೇಳಿದ್ದೀರಾ?

**ರೋಯಿ**—ನೀವೊಂದು ಪತ್ರದಲ್ಲಿ ನಿಮ್ಮ ಪತ್ನಿಯನ್ನು ಕಳುಹಿಸಿಕೊಟ್ಟದ್ದು ಆಗ ಏನೂ ಕೆಲಸವಿಲ್ಲದೆ ಬೇಸರದಿಂದ ಬಿದ್ದಿರಬೇಕಾಗಿದೆಯೆಂದು ಬರೆದಿಲ್ಲವೇ?

**ಪ್ರಮಥ**—ನಾನು ಬೇಸರವನ್ನು ಕಳೆಯಲಿಕ್ಕಾಗಿಯೇ ಪತ್ನಿಯ ಹತ್ತಿರ ಹೋಗಿ ಮಲಗುತ್ತಿದ್ದೆ.

**ರೋಯಿ**—ನೀವು ಮಗುವನ್ನು ನಿಮ್ಮ ತಂಗಿಯರಿಗೆ ತೋರಿಸಲಿಕ್ಕೆಂದು ಕೊಂಡು ಹೋದುದುಂಟೋ?

**ಪ್ರಮಥ**—ಇಲ್ಲ, ಮಗುವನ್ನು ವೀಣೆಯೇ ಹಿಡುಕೊಳ್ಳುತ್ತಿದ್ದಳು. ಈಗ ಒಂದು ವರ್ಷದಿಂದ ನಾನು ಮಗುವನ್ನು ನೋಡಿಯೇ ಇಲ್ಲ.

**ನ್ಯಾಯಾಧೀಶ**—ನೀವು ಎರಡೂವರೆ ಘಂಟೆಗೆ ಬಂಗಾಳ ಕಟ್ಟಡಕ್ಕೆ ಏಕೆ ಹೋಗಿದ್ದೀರಿ.

**ಪ್ರಮಥ**—ಹೆಂಡತಿಯ ರಹಸ್ಯವನ್ನು ಶೋಧಿಸಲಿಕ್ಕೆ.

**ನ್ಯಾಯಾಧೀಶ**—ವೀಣೆಯು ೩೨ನೆಯ ಅಕ್ಟೋಬರಿನಿಂದ ೩೩ನೇ ಎಪ್ರಿಲು ತನಕ ನಿಮ್ಮಲ್ಲಿದ್ದಳು. ೩೩ನೆಯ ಅಗೋಸ್ತಿನಲ್ಲಿ ಪ್ರಸವವಾಗಿದೆಯಲ್ಲವೇ?

**ಪ್ರಮಥ**—ಅಹುದು.

**ನ್ಯಾಯಾಧೀಶ**—ನೀವು ಮಗುವು ಹುಟ್ಟುವ ಮೊದಲೇ ಅದು ನಿಮ್ಮದಲ್ಲವೆಂದು ತಿಳಿದಿಬೆಯೆಂದು ಹೇಳಿದ್ದೀರಿ. ಹಾಗೆ ಯಾವಾಗ ತಿಳಿಯಿತು?

**ಪ್ರಮಥ**—೩೨ನೆಯ ದಶಂಬರಿನಲ್ಲಿ.

**ನ್ಯಾಯಾಧೀಶ**—ನೀವು ನಿಮ್ಮ ಹೆಂಡತಿಗೆ ಪರಪುರುಷನಲ್ಲಿ ಪ್ರೇಮವಿದೆಯೆಂದಾಗಲಿ, ಮಗುವು ನಿಮ್ಮದಲ್ಲವೆಂದಾಗಲಿ ನಿಮ್ಮ ಅತ್ತೆ-ಮಾವಂದಿರಲ್ಲೂ ಸಂದೇಹವನ್ನಾದರೂ ಹೇಳಿಲ್ಲ!

**ಪ್ರಮಥ**—ಇಲ್ಲ.

**ನ್ಯಾಯಾಧೀಶ**—ನೀವು ಯಾರನ್ನೂ ತಿರಸ್ಕರಿಸಲಿಲ್ಲ!

**ಪ್ರಮಥ**—ನಾನು ಸುರೇಶಬಾಬುವೊಡನೆಯೂ ನನ್ನ ಪತ್ನಿಯನ್ನು ಬಿಟ್ಟುಬಿಡೆಂದು ಹೇಳಹೋಗಿಲ್ಲ.

**ನ್ಯಾಯಾಧೀಶ**—ಅದೇಕೆ?

**ಪ್ರಮಥ**—ಆತನೊಬ್ಬ ಪ್ರಭಾವಶಾಲಿ ಶಕ್ತಿವಂತ ವ್ಯಕ್ತಿಯಾದುದರಿಂದ ನಾನಾವ ವಕೀಲನಲ್ಲಿಗೂ ಹೋಗಿಲ್ಲ.

**ನ್ಯಾಯಾಧೀಶ**—ಆದರೆ, ಮೊಕದ್ದಮೆಯೇನೋ ನಡೆದಿದೆ, ನಿಮ್ಮ ಮನೆಯನ್ನೇ ಲುಠಾಯಿಸುತ್ತಿರುವವನನ್ನೂ ನೀವು ಎದುರಿಸಲಿಲ್ಲ!

**ಪ್ರಮಥ**— ನನ್ನ ಯತ್ನವು ಸಾಗತಕ್ಕುದಲ್ಲವೆಂದು.

ಇಲ್ಲಿಗೆ ಪ್ರಮಥನೊಡನೆ ಚರ್ಚೆಯು ತೀರಿತು. ನ್ಯಾಯಾಧೀಶರೂ ಎದ್ದರು. ಆಯಾ ಪಕ್ಷದವರು ಮನಬಂದಂತೆ ಮಾತನಾಡುತ್ತಾ ಹೊರಟು ಹೋದರು. ಬೆನರ್ಜಿಯು ಪ್ರಮಥನನ್ನು ಕರೆದು 'ನೀವು ಪತ್ನಿಯೊಡನೆ ಇಷ್ಟೊಂದು ಸಂಬಂಧವನ್ನಿಟ್ಟುಕೊಂಡಿದ್ದುದು ನನಗೆ ಮೊದಲು ತಿಳಿಯದೆ ಹೋಯಿತೆಂ'ದನು.

---

## ಹದಿನೇಳನೆಯ ಪರಿಚ್ಛೇದ

ಉಭಯ ಪಕ್ಷದ ಮಹನೀಯರೂ ಎಪ್ರಿಲು ಹದಿನಾರನೆಯ ದಿನ ತಿರುಗಿ ನ್ಯಾಯಸ್ಥಾನದಲ್ಲಿ ನೆರೆದರು. ಆ ದಿನ ಒಬ್ಬಿಬ್ಬರ ಅಡ್ಡವಿಚಾರಣೆಯು ನಡೆಯಬೇಕಿತ್ತು. ಆದರೆ ಪ್ರಮಥನಾಥನೇ ಅಂದು ನ್ಯಾಯಸ್ಥಾನದಲ್ಲೆಲ್ಲೂ ಕಂಡುಬರಲಿಲ್ಲ. ಆತನ ವಕೀಲ್ ದಿನೇಶಬೆನರ್ಜಿಯು ನ್ಯಾಯಾಧೀಶರನ್ನು ಕುರಿತು 'ಮುದ್ದಯಿಯು ಮೊಕದ್ದಮೆಯ ಖರ್ಚಿಗಾಗಿ ಹಣವನ್ನು ಒದಗಿಸಿಕೊಂಡುಬರಲು ಹೋಗುತ್ತೇನೆಂದಿದ್ದಾನೆ. ಆತನ

ಗೈರ್‌ಹಾಜರಿಯಲ್ಲೂ ತನಿಖಿ ನಡೆಯಬೇಕು' ಎಂದು ವಿಜ್ಞಾಪನಾ ಪತ್ರವನ್ನು ಬರಕೊಟ್ಟ ಮೇಲೆ ವ್ಯವಹರಣೆಗಾರಂಭವಾಯಿತು.

ವಿನೋದವಿಹಾರಿಯ ವಿಚಾರಣೆಯೇನೂ ಸಮರ್ಪಕವಾಗಿದ್ದಿಲ್ಲ. ಪ್ರಕೃತಕ್ಕೆ ಸಂಬಂಧಪಡದೇ ಇದ್ದ ಎಗಡು ಪ್ರಶ್ನೆಗಳಿಂದ ಆತನ ಸಾಕ್ಷ್ಯದ ಮಹತ್ವವನ್ನು ತಗ್ಗಿಸಿಬಿಟ್ಟರು. ಕೊನೆಗೆ ಆತನು ಹೇಳಿದುದೇನಂದರೆ—'ಈ ಮೊಕದ್ದಮೆಯ ಕುರಿತು ನನಗೂ ಪ್ರಮಥನಿಗೂ ಮತಭೇದವಿತ್ತು. ಇಂತಹ ದೊಡ್ಡ ಮನುಷ್ಯನ ಮೇಲೆ ಮೊಕದ್ದಮೆಯನ್ನು ಹೂಡುವುದು ಸರಿಯಲ್ಲವೆಂದೂ, ಬೇಕಿದ್ದರೆ ಏನಾದರೂ ಸಂಧಾನವನ್ನು ನಡೆಯಿಸುವುದೊಳ್ಳೆಯದೆಂದೂ ನಾನವನಿಗೆ ತಿಳುಹಿಸಿದ್ದೆ.'

ಅಷ್ಟರಲ್ಲಿ ನ್ಯಾಯಾಧೀಶರು—'ಸಂಧಾನವೆಂದರೆ ನಿಮ್ಮ ಅಭಿಪ್ರಾಯವೇನು?' ಎಂದು ಕೇಳಿದರು.

**ವಿನೋದವಿಹಾರಿ**—ಮೊಕದ್ದಮೆಯಂತೂ ಆಗದಂತೆ ಪ್ರಯತ್ನಿಸಬಹುದಿತ್ತೆಂದು.

**ನ್ಯಾಯಾಧೀಶ**—ಮುದ್ದಯಿಯು ಇಂದು ಎಲ್ಲಿ ಹೋಗಿರುವನೆಂಬುದು ನಿಮಗೆ ಗೊತ್ತೆ?

**ವಿನೋದವಿಹಾರಿ**—ಇಲ್ಲ.

ಅಷ್ಟರಲ್ಲಿ ಅವನೀಕಾಂತ ರೋಯಿಯು ಜೂನ್ ೧೭ರ ಘಟನೆಯ ಕುರಿತು ಪ್ರಶ್ನಿಸಲು ವಿನೋದವಿಹಾರಿಯು ತಾನು ಆ ದಿನ ಬಂಗಾಳ ಕಟ್ಟಡದಲ್ಲಿ ಕಂಡಿದ್ದ ಸಂಗತಿಯನ್ನೆಲ್ಲಾ ವಿವರಿಸಿದನು.

**ರೋಯಿ**—ಮಲಗುವ ಮನೆಯಲ್ಲಿ ನೀವು ಆಪಾದಿತರನ್ನು ಕಂಡಿದ್ದೀರಾ?

**ವಿನೋದ**—ಅಹುದು.

**ರೋಯಿ**—ಅದಕ್ಕೆ ಹಿಂದೆ ನೀವವರನ್ನು ಕಂಡದ್ದುಂಟೊ?

**ವಿನೋದ**—ಇಲ್ಲ.

ಅನಂತರ, ವಿಭೂತೀಭೂಷಣ ಸರಕಾರನನ್ನು ಕರೆಯಲು ಆತನು ಬಂದು ಈ ರೀತಿಯಾಗಿ ತನ್ನ ಹೇಳಿಕೆಯನ್ನಿತ್ತನು.

'ಈ ಮೊಕದ್ದಮೆಯಲ್ಲಿ ವಿಶೇಷವಾಗಿ ನಾನು ಪ್ರವೇಶಿಸಿಲ್ಲ. ಅಂತೂ ಆಪಾದಿತನು ಜೂನಿನಲ್ಲಿ ವೀಣೆಯೊಡನೆ ವ್ಯಭಿಚಾರವನ್ನು ನಡೆಸಿದ್ದಾನೆಂದು ಬಲ್ಲೆ. ಮಾತ್ರವಲ್ಲ, ಇದು ಹಲವು ಬಾರಿ ನಡದದೆಯೆಂದೂ ಆ ಮೇಲೆ ನನಗೆ ತಿಳಿಯಿತು.

ಜೂನಿನಲ್ಲೊಂದು ದಿನ ಮುದ್ದಯಿಯು ನಮ್ಮಲ್ಲಿಗೆ ಉಳಕೊಳ್ಳಲು ಬಂದಿದ್ದನು. ವೀಣೆಯ ವರ್ತನೆಯ ಕುರಿತು ಅವಳಿಗೂ ಪ್ರಮಥಬಾಬುವಿಗೂ ಆ ಮೊದಲೇ ತುಂಬಾ ಜಗಳವಾಗಿತ್ತು. ಕಳೆದ ಫೆಬ್ರವರಿಯಲ್ಲಿ ಮುದ್ದಯಿಗೆ ಮೊಕದ್ದಮೆಯ ಕುರಿತು ನಾನೂ ಸಲಹೆಯನ್ನಿತ್ತಿದ್ದೆ.

ಸುರೇಶಬಾಬುವನ್ನು ನಾನು ಮೊದಲು ಕಂಡಿಲ್ಲವಾದರೂ ಈ ಘಟನೆಯ ಅನಂತರ ಹಲವು ಬಾರಿ ಕಂಡಿದ್ದೆ.'

ಇಲ್ಲಿಗೆ ವಿಚಾರಣೆಗಳೆಲ್ಲಾ ಕೊನೆಗೊಂಡವು. ಆಗ ನ್ಯಾಯಾಧೀಶರು—'ಮುದ್ದಯಿಯು ಇಂದು ಕೋರ್ಟಿಗೆ ಗೈರಹಾಜರಿಯಾಗಿದ್ದಾನೆ. ಅವನಿಂದು ಕಲಿಕತ್ತೆಯಲ್ಲೇ ಇಲ್ಲವೇ?' ಎಂದು ಪ್ರಶ್ನಿಸಿದರು.

ಆಗ ದಿನೇಶಬೆನರ್ಜಿಯು—'ಇಲ್ಲ. ಅವನು ಕಲಿಕತ್ತೆಯಿಂದ ಹೊರಟುಹೋಗುವ ಮೊದಲು ನನಗೆ ಭೆಟ್ಟಿಯಾಗಿದ್ದನು. ಹಣಕ್ಕಾಗಿ ಎಲ್ಲೋ ಹೋಗಬೇಕಾಗಿದೆಯೆಂದು ಹೇಳಿಹೋಗಿದ್ದಾನೆ.' ಎಂದನು. ಅಷ್ಟರಲ್ಲೇ ಪ್ರಫುಲ್ಲನು ಜನರ ನಡುವಿನಿಂದ ನೂಕಿಕೊಂಡು ಓಡಿಬಂದವನಂತೆ ಬಲವಾಗಿ ಶ್ವಾಸಗಳನ್ನೆಳೆಯುತ್ತಾ ನ್ಯಾಯಾಧೀಶರ ಮುಂದೆ ಬಂದು 'ಒಂದು ವಿಜ್ಞಾಪನೆಯಿದೆ' ಯೆಂದನು.

ನ್ಯಾಯಾಧೀಶರು 'ಅದೇನೆಂ'ದರು.

**ಪ್ರಫುಲ್ಲ**—ಮುದ್ದಯಿಯು ಕಾಣೆಯಾಗಿದ್ದಾನೆ.

**ನ್ಯಾಯಾಧೀಶ**—ಎಂದು?

**ಪ್ರಫುಲ್ಲ**—ಮೊನ್ನೆ ರವಿವಾರ ರಾತ್ರಿ ಮಲಗಿದ್ದವನು ಬೆಳಿಗ್ಗೆ ಇರಲಿಲ್ಲ; ಆದರೆ ಇದೊಂದು ಪತ್ರವನ್ನು ನನ್ನ ಮೇಜಿನ ಮೇಲೆ ಇಟ್ಟಿದ್ದಾನೆ.

ಹೀಗೆಂದು ಹೇಳಿ ಪ್ರಫುಲ್ಲನು ಒಂದು ಸಣ್ಣ ಪತ್ರವನ್ನು ಜೇಬಿನಿಂದ ಹೊರತೆಗೆದು ದಿನೇಶಬೆನರ್ಜಿಯ ಕೈಗಿತ್ತನು. ಅದು ಆತನ ಹೆಸರಿಗೇ ಬರೆಯಲ್ಪಟ್ಟಿದ್ದುದನ್ನು ಕಂಡು ಕುತೂಹಲಗೊಂಡು ಬೆನರ್ಜಿಯು ಪತ್ರವನ್ನು ಪ್ರಕಟವಾಗಿ ಓದಿದನು.

ಕಲಿಕತ್ತೆ, ೧೪-೪-'೩೫

'ಶ್ರೀಮಾನ್ ದಿನೇಶ ಬೆನರ್ಜಿಯವರಿಗೆ—

ನನ್ನೀ ಹೇಳಿಕೆಯನ್ನು ತಾವು ನಡೆಯಿಸಿಕೊಡುವಿರೆಂದು ಭರವಸೆಯುಳ್ಳವನಾಗಿದ್ದೇನೆ. ನಾನು ಒಂದು ರಹಸ್ಯಮಯ ದುರಂತ ತಂತ್ರದಲ್ಲಿ ಸಿಕ್ಕಿದ್ದೇನೆ. ಹಾಗೂ ಅದರಿಂದ ನನಗೆ ಶುಭವಿಲ್ಲ. ನನಗೆ ಅಲ್ಪಸ್ವಲ್ಪ ಬರುವ, ಸಲ್ಲುವ ಹಣದ ವ್ಯವಹಾರವಿದೆ. ಆ ನನ್ನ ಯಾವತ್ತು ವ್ಯವಹಾರದ ಸಂಪೂರ್ಣ ಅಧಿಕಾರವನ್ನು ನನ್ನ ಅಣ್ಣನ ಮಗನಾದ ಪ್ರಫುಲ್ಲನಿಗೆ ಕೊಟ್ಟಿದ್ದೇನೆ. ಆತನು ಫೇನಿಗೆ ಹೋಗಿ ನನ್ನ ಎಲ್ಲಾ ಸ್ವತ್ತುಗಳನ್ನೂ ಸ್ವಾಧೀನಪಡಿಸಿಕೊಳ್ಳಲಿ. ನನ್ನ ಶಾಲಾಫಂಡಿನಲ್ಲೂ ಸ್ವಲ್ಪ ರೂಪಾಯಿಗಳಿರುತ್ತವೆ. ಅದರಲ್ಲಿ ೩೦೦ ರೂಪಾಯಿಗಳನ್ನು ಜಯಂತಕುಮಾರನಿಗೆ ಕೊಡಬೇಕು. ಉಳಿದ ಹಣಗಳೂ ಸ್ವತ್ತುಗಳೂ ಎಲ್ಲಾ ಪ್ರಫುಲ್ಲನದಾಗಿವೆ.

ಪ್ರಫುಲ್ಲನಿಗಾಗಿ ನನ್ನ ಇನ್ನೊಂದು ಪತ್ರವು ಬರಬಹುದು. ಆದರೆ ನನ್ನನ್ನು ಯಾರೂ ಹುಡುಕುವ ಆವಶ್ಯಕತೆಯಿಲ್ಲ.

**ಪ್ರಮಥನಾಥ ಸರಕಾರ.'**

ನ್ಯಾಯಸ್ಥಾನವೆಲ್ಲವೂ ಪಿಸುಮಾತುಗಳಿಂದ ತುಂಬಿಹೋಯಿತು.

# ಹದಿನೆಂಟನೆಯ ಪರಿಚ್ಛೇದ

ಪ್ರಮಥನಾಥನನ್ನು ಹಲವರು ಹುಡುಕಿದರು. ಆದರೆ ಯಾರಿಗೂ ಆತನ ಪತ್ತೆ ಹತ್ತಲಿಲ್ಲ. ಆತನೆಲ್ಲಿಗೆ ಹೋದನು? ಏತಕ್ಕೆ ಹೋದನೆಂಬುದರ ಕುರಿತು ಒಬ್ಬೊಬ್ಬರು ಒಂದೊಂದು ವಿಧವಾಗಿ ಆಡಿಕೊಳ್ಳುತ್ತಿದ್ದರು.

ದಿನೇಶಬೆನರ್ಜಿಯು ಪ್ರಫುಲ್ಲನನ್ನು ಫೇನಿಗೆ ಕಳುಹಿಸಿಕೊಟ್ಟನು. ಪ್ರಫುಲ್ಲನು ಫೇನಿಯಿಂದ ಹಲವು ಸ್ಥಳಗಳಿಗೆ ತಂತೀವಾರ್ತೆಗಳನ್ನಿತ್ತು ವಿಚಾರಿಸಹತ್ತಿದನು.

ತನ್ನಲ್ಲಿ ಹೇಳಿದ ಸಂಗತಿಯು ನಿಜವಲ್ಲೆಂದು ದಿನೇಶಬೆನರ್ಜಿಗೆ ಆಗ ತಿಳಿಯಿತು. ಆತನೂ ಕಲಿಕತ್ತೆಯಲ್ಲೆಲ್ಲಾ ಹುಡುಕಿಸಿದನು. ನ್ಯಾಯಸ್ಥಾನದ ಕಡೆಯಿಂದಂತೂ ಬಲು ಸೂಕ್ಷ್ಮವಾಗಿ ಹುಡುಕಿಸಹತ್ತಿದರು. ಆದರೆ ಎಲ್ಲೆಲ್ಲೂ ಪ್ರಮಥನಾಥನನ್ನು ಕಂಡವರಿಲ್ಲ.

ಒಂದು ದಿನ ದಿನೇಶಬೆನರ್ಜಿಯು ವಿಭೂತೀಭೂಷಣನೊಡನೆ ಗೋಪೀನಾಥನ ಮನೆಗೆ ಹೋದನು, ಅಲ್ಲಿ ವಿನೋದವಿಹಾರಿಯೂ ಇದ್ದನು. ಎಲ್ಲರೂ ಪ್ರಮಥನಾಥನ ವಾರ್ತೆಯೇ ಇಲ್ಲದುದಕ್ಕಾಗಿ ಬೇಸರಗೊಂಡಿದ್ದರು. ಅದೇ ದಿನ ಪ್ರಫುಲ್ಲನ ಪತ್ರವೊಂದು ಗೋಪೀನಾಥನಿಗೆ ತಲುಪಿತ್ತು. ಅದರಲ್ಲಿ ಪ್ರಫುಲ್ಲನು—ಪ್ರಮಥನಾಥನು ಫೇನಿಯ ಕಡೆಗೆ ಬಂದಿಲ್ಲವೆಂದೂ ಮತ್ತು ಆತನಿಂದ ತನಗೆ ಬರಬಹುದಾಗಿದ್ದ ಇನ್ನೊಂದು ಪತ್ರವೂ ಅದು ತನಕ ಬಂದಿಲ್ಲವೆಂದೂ ಬರೆದಿದ್ದನು. ಗೋಪೀನಾಥನು ಆ ಪತ್ರವನ್ನು ತೋರಿಸಿ ಬೆನರ್ಜಿಯೊಡನೆ 'ಮಹಾಶಯ! ಪ್ರಮಥಬಾಬುವು ಹೀಗೇಕೆ ಮಾಡಿದನೆಂ'ದು ಕೇಳಿದನು.

**ಬೆನರ್ಜಿ**—ಏಕೆಂದು ಹೇಳಲಿ, ಲೋಕದಲ್ಲಿ ಒಬ್ಬರೊಬ್ಬರ ಬುದ್ಧಿವಿಚಾರಗಳೂ ಒಂದೊಂದು ರೀತಿಯಾಗಿರುತ್ತವೆ.

**ಗೋಪೀನಾಥ**—ಮೊಕದ್ದಮೆಯಲ್ಲಿ ಅವಗುಣವೇ ಆಗುವುದಾದರೂ ಆತನು ಹೀಗೆ ಹೇಳದೆ ಹೋಗಬೇಕೇಕೆ?

**ಬೆನರ್ಜಿ**—ಅವಗುಣವೇ ಅಲ್ಲ, ಅದು ತಿರುಗಿಬೀಳುವ ಸಂಭವವೂ ಇದೆ.

**ವಿನೋದವಿಹಾರಿ**—ಹ! ಎಂತಹ ಸಾಧನೆಯು ಯಾವ ರೀತಿ ಪರಿಣಮಿಸಿತು!

**ವಿಭೂತೀಭೂಷಣ**—ಅದೇನು ಹೊಸದಾಗಿ ಹೇಳುವೆಯೋ? ನ್ಯಾಯಸ್ಥಾನದಲ್ಲಿ ಮೊಕದ್ದಮೆಯನ್ನು ಹೂಡುವುದೆಂದರೆ ಜುಗಾರಿಯಾಟಕ್ಕಿಳಿದಂತೆ. ಸತ್ಯವು ಎಲ್ಲೋ ಒಂದು ಮೂಲೆಗೆ ಸೇರಿಹೋಗುತ್ತೆ. ಲೌಕಿಕಶಕ್ತಿಯೇ ಗೆಲ್ಲುತ್ತದೆ.

**ಬೆನರ್ಜಿ**—ಹೀಗಿದ್ದರೂ ಆತನು ವೀಣೆಯೊಡನೆ ತುಂಬಾ ವ್ಯವಹಾರಗಳನ್ನು ನಡೆಸುತ್ತಿದ್ದನಲ್ಲ! ಇಂತಹನಿಗೆ ಮರ್ಯಾದೆಯಿಂದ ಸುಮ್ಮನಿದ್ದುಬಿಡುವುದೇ ಒಳ್ಳೆದಿತ್ತು. ಈ ಮೊಕದ್ದಮೆ ಏಕೆ ಬೇಕಿತ್ತು?

**ವಿಭೂತೀಭೂಷಣ**—ಬೆನರ್ಜಿಜಿ! ಆಗಿಹೋದುದನ್ನು ಮಾತನಾಡಿ ಪ್ರಯೋಜನ ತಾನೆ ಏನು? ಪ್ರತ್ಯಕ್ಷ ಕಂಡ ಸಂಗತಿಗಳೂ ಸುಳ್ಳೆನಿಸಲ್ಪಡುವುವೆಂದು ಯಾರು ಎಣಿಸಿದ್ದರು!

**ಬೆನರ್ಜಿ**—ನಾನು ಎಷ್ಟೋ ಮೊಕದ್ದಮೆಗಳ ಸಂಗತಿಯನ್ನು ಕೇಳಿದ್ದೆ. ಹೆಂಗು

ಸನ್ನು ವ್ಯಭಿಚಾರಿಣಿಯೆಂದು ರುಜುಪಡಿಸುವುದು ಬಲು ಕಷ್ಟ. ಈ ಮೊಕದ್ದಮೆಯಂತೂ ಸಾಹಸದ ಕಾರ್ಯವೇ ಸೈ. ಪ್ರಕೃತ ಅಪಾದಿತನೇನು ಸಾಮಾನ್ಯನಲ್ಲವಷ್ಟೆ. ಹಗಲು ರಾತ್ರೆ ರಾತ್ರೆ-ಹಗಲು ಮಾಡಬಲ್ಲ ಕಿಲಾಡಿ. ಅಂತಹನು ತಪ್ಪನ್ನೊಪ್ಪುವುದೆಂದರೇನು? ಕೋರ್ಟು ಅಂತಹನಲ್ಲಿ ತಪ್ಪು ಹೊರಿಸುವುದೆಂದರೇನು!

**ವಿಭೂತೀಭೂಷಣ**—(ವ್ಯಂಗ್ಯವಾಗಿ) ತಮಗೆ ಆತನ ವಿಚಾರ ಮೊದಲು ತಿಳಿದಿಲ್ಲ ವೆಂದು ತೋರುತ್ತೆ!

**ಬೆನರ್ಜಿ**—ತಿಳಿದಿತ್ತು. ಆದರೆ, ಪ್ರಮಥಬಾಬುವು ಇಂತಹ ಕುಲಟೆಯನ್ನೂ ತಿರಸ್ಕರಿಸದೆ ಏನೋ ಕ್ಷುದ್ರ ಸ್ವಾರ್ಥಕ್ಕೆ ಬಲಿಬಿದ್ದು ಆಕೆಯೊಡನೆ ಪ್ರೀತಿವ್ಯವಹಾರವನ್ನು ನಡೆಸುತ್ತಲೇ ಇದ್ದನೆಂಬುದು ನನಗೆ ತಿಳಿಯದಾಯಿತು. ಎಷ್ಟೊಂದು ಪತ್ರಗಳವು! ಕೇಳಿರಿ. ಯಾರಿಗೆ ಪತ್ರದ ಮೂಲಕ ಚುಂಬನಗಳನ್ನು ಸ್ವೀಕರಿಸೆಂದು ಬರೆದಿದ್ದನೋ, ತನ್ನ ಸಂಸಾರವನ್ನೇ ಮಣ್ಣುಗೂಡಿಸ ಹೊರಟಿದ್ದ ಮತ್ತಿಸ್ನಾವನನ್ನು ಕೆಲಸ ಕೊಡಿಸ ಬೇಕೆಂದೂ ಕೇಳಿಕೊಂಡಿದ್ದನೋ ಅಂತಹ ವೀಣೆ ಮತ್ತು ಸುರೇಶರ ಮೇಲೆ ತಪ್ಪನ್ನು ಹೊರಿಸುವುದೆಂದರೇನು? ಮೊಕದ್ದಮೆಯನ್ನು ಹೂಡುವುದೆಂದರೇನು? ಬಾಪೂಜಿ! ವಿಚಾರ ಮಾಡಿರಿ. ಪ್ರಮಥಬಾಬುವು ತನ್ನ ಗಂಟಲನ್ನು ತಾನೇ ಸುತ್ತಿಕೊಂಡಿದ್ದನೆನಬೇಕು. ಬೇರಿನ್ನೇನ ಹೇಳಲಿ.

**ವಿಭೂತೀಭೂಷಣ**- ಪ್ರಾರಬ್ಧವನ್ನು ತಪ್ಪಿಸುವರಾರು? ಅಂತೂ ನವನಾಗರಿಕ ಯುವತಿಯರ ಥಳಕಿಗೆ ಮನಸೋಲುವ ಯುವಕರಿಗೊಂದು ಒಳ್ಳೆ ಪಾಠವನ್ನು ಪ್ರಕಟಿಸಿ ದಂತಾಯಿತು. ಆ ದುರಾಚಾರಿಗಳಂತೂ ಹಾಳಾಗಿ ಹೋಗಲಿ. ಈ ಮಹಾರಾಯ ನಾದರೂ ಹೀಗೇಕೆ ಮಾಡಬೇಕಿತ್ತು. ಆಗಲಿ ಬೆನರ್ಜಿಯವರೇ! ತೀರ್ಪು ಎಂದಿಗಿಟ್ಟದೆ?

**ಬೆನರ್ಜಿ**—ಇಪ್ಪತ್ತೈದನೆಯ ತಾರೀಕಿಗೆ.

**ವಿಭೂತೀಭೂಷಣ**—ಪ್ರಮಥಬಾಬುವು ಅಂದಾದರೂ ಬರಬಹುದೇ?

**ಬೆನರ್ಜಿ**—ಛೆ! ಅಂದು ಬರುವವನು ಮೊನ್ನೆ ಏಕೆ ತಪ್ಪಿಸುತ್ತಿದ್ದನು? ಆತನ ಹೃದಯವೇನೋ ಗಂಭೀರವಾದುದು. ನನಗೀಗ ತಿಳಿಯಿತು. ಪುಣ್ಯಾತ್ಮ ನನಗೊಂದಿಷ್ಟು ಸೂಚನೆಯನ್ನಿತ್ತಿದ್ದರೆ! ಕಾರ್ಯವು ಕೈಮೀರಿ ಹೋಯಿತು. ಇನ್ನು ಕಾಣುವುದೆಂದರೆ ಪ್ರಫುಲ್ಲಸರಕಾರನಿಗಾಗಿ ಬಂದರೆ ಅವನದೊಂದು ಪತ್ರ. ಇರಲಿ. ಗೋಪೀನಾಥ! ನನ ಗೀಗ ಕಾರ್ಯಾಂತರವಿರುವುದು. ಏನಾದರೂ ವಿಶೇಷ ವಾರ್ತೆಯಿದ್ದರೆ ಕೂಡಲೇ ನನಗೆ ತಿಳುಹಿಸಬೇಕು. ಈಗ ಹೋಗಿಬರುವೆನು.

ಎಂದು ಹೇಳಿ ಬೆನರ್ಜಿಯು ಎದ್ದ. ವಿಭೂತೀಭೂಷಣನೂ ತನ್ನ ನಿವಾಸದ ಕಡೆಗೆ ನಡೆದ.

ವಿನೋದವಿಹಾರಿಯೂ ಗೋಪೀನಾಥನೂ ಅಲ್ಲೇ ಏನೋ ಮಾತನಾಡುತ್ತಿದ್ದರು.

## ಹತ್ತೊಂಬತ್ತನೆಯ ಪರಿಚ್ಛೇದ

ಮುರ್ಶಿದಾಬಾದಿಗೆ ಹೋಗುತ್ತಿರುವ ಟಪ್ಪಾಲುಗಾಡಿಯು ಅಕಸ್ಮಾತ್ತಾಗಿ ನಿಂತಿತು. ಅಪಾಯಸೂಚಕ ಸಂಕಲಿಯನ್ನೆಳೆದವರಾರೆಂದು ಗಾರ್ಡು ಒಂದೊಂದೇ ಗಾಡಿಯನ್ನು ವಿಚಾರಿಸುತ್ತಾ ಬರುತ್ತಿರುವಲ್ಲಿ ಒಂದು ಗಾಡಿಯ ಕಿಟಕಿ ಬಾಗಿಲುಗಳಲ್ಲಿ ಜನರು ಹೊರ ಬಿದ್ದು ಕೈಚಪ್ಪಾಳೆಯನ್ನು ಹಾಕುತ್ತಾ ಕೂಗುತ್ತಿದ್ದರು. ಗಾರ್ಡು ಆ ಗಾಡಿಯ ಒಳಗೆ ಹತ್ತಿ ನೋಡುವಾಗ ಒಬ್ಬ ಮನುಷ್ಯನು ಮೂರ್ಛೆಗೊಂಡುಬಿದ್ದಿದ್ದನು. ಗಾಡಿಯಲ್ಲಿನ ಇತರ ಪ್ರಯಾಣಿಕರನ್ನು ವಿಚಾರಿಸುವಾಗ ಆತನು ಸುಮ್ಮನೆ ಕುಳಿತಿದ್ದವನೇ ಅಕಸ್ಮಾತ್ ಬಿದ್ದುಬಿಟ್ಟನೆಂದೂ ಕರೆದರೆ ಮಾತುಕಥೆಗಳೊಂದೂ ಇಲ್ಲದುದರಿಂದ ಏನು ಮಾಡುವುದೆಂದು ತಿಳಿಯದೆ ಗಾಡಿಯು ನಿಲ್ಲಿಸಲ್ಪಟ್ಟಿತೆಂದೂ ತಿಳಿಸಿದರು. ರೈಲ್ವೇ ಡಾಕ್ಟರನು ಪರೀಕ್ಷಿಸಿ ಮಿತಿಮೀರಿ ಅಫೀಮು ಸೇವನೆ ಮಾಡಿದ್ದಾನೆ. ಪ್ರಸಂಗವು ಕಠಿಣವಿದೆ. ಕೂಡಲೇ ಗಾಡಿಯು ಹೊರಡಲೆಂದು ಹೇಳಿ ಏನೋ ತಾತ್ಕಾಲಿಕ ಚಿಕಿತ್ಸೆಯನ್ನು ನಡೆಸಹತ್ತಿದನು.

ಗಾಡಿಯು ಕೆಲವೇ ನಿಮಿಷಗಳಲ್ಲಿ ಮುರ್ಶಿದಾಬಾದು ಸ್ಟೇಶನಿನಲ್ಲಿ ಬಂದು ನಿಂತಿತು. ಗಾರ್ಡಿನ ಸೂಚನೆಯಂತೆ ಕೂಡಲೇ ರೈಲ್ವೇ ಕರ್ಮಚಾರಿಗಳು ಬಂದು ಮೂರ್ಛಿತನಾಗಿ ಬಿದ್ದಿದ್ದ ಮನುಷ್ಯನನ್ನು ಎತ್ತಿಕೊಂಡು ರೈಲ್ವೆ ಆಸ್ಪತ್ರೆಗೆ ಕೊಂಡುಹೋದರು, ವಿಚಾರಿಸಲಾಗಿ ಆತನ ಸಂಗಾತಿಗಳೆಂದು ಗಾಡಿಯಲ್ಲಿ ಯಾರೂ ಇದ್ದಿಲ್ಲ

ಮೂರ್ಛಿತ ಮನುಷ್ಯನು ೩೦-೩೫ ವಯಸ್ಸಿನ ತರುಣನಾಗಿದ್ದನು. ಉಡಿಗೆತೊಡಿಗೆ ಅಲಂಕಾರಗಳಿಂದ ವಿದ್ಯಾವಂತ ಸಭ್ಯ ಗೃಹಸ್ಥನೆಂದೆನಬಹುದಿತ್ತು. ಆದರೆ, ಆತನಾರೆಂದು ಅಲ್ಲಿದ್ದವರಾರೂ ಅರಿಯರು. ಇಬ್ಬರು ಡಾಕ್ಟರರು ಸರಿಯಾಗಿ ಚಿಕಿತ್ಸೆಯನ್ನು ನಡೆಸುತ್ತಿದ್ದರಾದರೂ ಅವರ ಮುಖಗಳಲ್ಲಿ ಏನೂ ಉತ್ಸಾಹವು ಕಂಡುಬರುತ್ತಿದ್ದಿಲ್ಲ. ಅಷ್ಟರಲ್ಲಿ ಪೋಲೀಸರು ಬಂದು ರಿಪೋರ್ಟು ಬರಕೊಳ್ಳಹತ್ತಿದರು.

ಆ ವೇಳೆಗೆ ಸರಿಯಾಗಿ ಪೋಲೀಸ್ ಸಬ್ ಇನ್ಸ್ಪೆಕ್ಟರರು ವೇಗವಾಗಿ ಅಲ್ಲಿಗೆ ಬಂದರು. ಬಂದವರೆ ರೋಗಿಯನ್ನು ಪರೀಕ್ಷಿಸಿ ಕುತೂಹಲಗೊಂಡು ತನ್ನ ಜೇಬಿನಿಂದ ಒಂದು ಭಾವಚಿತ್ರವನ್ನು ಹೊರತೆಗೆದು ನೋಡಿದರು. ರೋಗಿಯ ವಿಶೇಷವಾದ ಉಡುಪು ಅಲ್ಲೇ ತೆಗೆದಿಟ್ಟಿದ್ದನ್ನೂ ಹೋಗಿ ಪರೀಕ್ಷಿಸಿದರು. ರೋಗಿಯ ಕೋಟಿನ ಜೇಬಿನಲ್ಲಿ ಒಂದೆರಡು ಪುಸ್ತಕಗಳೂ ಕೆಲವು ಕಾಗದಪತ್ರಗಳೂ ಇದ್ದುವು. ಇನ್ಸ್ಪೆಕ್ಟರು ಒಂದೊಂದನ್ನಾಗಿ ಪರೀಕ್ಷಿಸುತ್ತಿರುವಲ್ಲಿ ಆಗಲೇ ಬರೆದು ಟಪ್ಪಾಲಿಗೆ ಹಾಕಲು ಸಿದ್ಧಮಾಡಿಟ್ಟದ್ದೊಂದು ಲಕೋಟೆಯು ದೊರೆಯಿತು. ಮೇಲುವಿಳಾಸವೋ—'To Mr. Prafullachandra Sarkar, Temple Road, Krishnanagar' ಎಂದಿದ್ದುದನ್ನು ಓದಿ ಇನ್ಸ್ಪೆಕ್ಟರು 'ಸಂದೇಹವಿಲ್ಲ'ವೆಂದಂದುಕೊಂಡರು. ಹಾಗೂ ಆ ಪತ್ರವನ್ನು ತನ್ನೊಡನೆ ಇಟ್ಟುಕೊಂಡು ಉಳಿದ ಸ್ವತ್ತುಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ಮೊಹರು ಮಾಡಿಸಿ, ಇನ್ಸ್ಪೆಕ್ಟರು ತಂತಿ ಆಫೀಸಿನ ಕಡೆಗೆ ಧಾವಿಸಿದರು.

## ಮುಂದೇನು?

ಕಲಿಕತ್ತೆಯಲ್ಲಿ ಪ್ರಸಿದ್ಧವಾದ ಈ ಮೊಕದ್ದಮೆಯ ಕೊನೆಯ ನಿರ್ಣಯವು ಯಾವ ರೀತಿಯಾಯಿತೋ ನಮಗರಿಯದು. ೩೫ನೆಯ ಇಸವಿಯ ಎಪ್ರಿಲ್ ಕೊನೆಯ ವಾರದಲ್ಲೊಂದು ದಿನ ಇದರ ನಿರ್ಣಯವಾಗಿರಬೇಕು. ಅಂತೂ ತೀರ್ಪನ್ನು ಕೊಡುವ ದಿನ ಕೋರ್ಟಿಗೆ ಒಂದು ತಂತೀವಾರ್ತೆಯು ತಲುಪಿತು. ಅದರಲ್ಲಿ 'ಮುದ್ದಯಿಯ ಪತ್ನಿಯಾಯಿತು. ಆದರೆ, ಆತ್ಮಹತ್ಯೆಯ ಉದ್ದೇಶದಿಂದಲೋ ಇನ್ನಾವ ಕಾರಣದಿಂದಲೋ ಮಿತಿಮೀರಿ ಅಫೀಮು ಸೇವನೆ ಮಾಡಿದ್ದುದರಿಂದ ಶೋಚನೀಯ ಸ್ಥಿತಿಯಲ್ಲಿದ್ದಾನೆ. ಚಿಕಿತ್ಸೆಯೇನೋ ನಡೆಯುತ್ತಿದೆ.' ಎಂದಿತ್ತು.

* * *

ನಮಗೆ ದೊರೆತ ಆಧಾರದಂತೆ ಈ ಕಥಾಭಾಗವು ಇಷ್ಟರಲ್ಲೇ ಕೊನೆಗೊಂಡಿರುತ್ತದೆ. ಆದರೆ, ಪ್ರಮಥನಾಥನ ಅವಸ್ಥೆಯೇನಾಯಿತು? ಪ್ರಫುಲ್ಲನಿಗಾತನು ಬರೆದ ಪತ್ರವೆಂತಹುದು? ವೀಣೆಯ ಭವಿಷ್ಯತ್ತು ಹೇಗೆ ಪರಿಣಮಿಸಿತು? ಎಂದು ಮುಂತಾದ ಆಕರ್ಷಕ ವೃತ್ತಾಂತಗಳನ್ನು ತಿಳಿಯುವ ಕುತೂಹಲವು ನಮ್ಮ ಪ್ರಿಯ ಪಾಠಕರಿಗಿರಲಾರದೇ? ಹಾಗಾದರೆ ಅವರು ನಿರೀಕ್ಷಿಸುತ್ತಿರುವರೇ?

